“Ithihasika Kathavali”

Kannada Nondetail for High Schools

# ಐತಿಹಾಸಿಕ ಕಥಾವಳಿ

(’ಸುವಾಸಿನಿ’ಯ ಸಂಗ್ರಹ)

ಲೇಖಕರು:

**ಶ್ರೀಮಾನ್ ಪಂಜೆ ಮಂಗೇಶರಾವ್**, ಬಿ. ಎ., ಎಲ್. ಟಿ.

*By*

Panje Mangesh Rau, B.A., L.T.

1945

[ಮೂರನೆಯ ಮುದ್ರಣ]

PUBLISHERS:

BALIGA & SONS.

Registered Publishers,

MANGALORE.

Price: 0-8-0 ಕ್ರಯ: ೦-೮-೦.

# ಪ್ರಕಾಶಕರ ಮುನ್ನುಡಿ

ಸಣ್ಣ ಕಥೆಗಳ ಉದ್ಭವ ಮತ್ತು ಪ್ರಚಾರದ ಈ ಯುಗದಲ್ಲಿ, ಈಗ ಮೂವತ್ತು ವರ್ಷಗಳ ಹಿಂದೆ ಪ್ರಚುರವಾದ ಈ ಹಳೆಯ ಕಥೆಗಳನ್ನು ಪ್ರಕಟಿಸುವ ಅಗತ್ಯವೇನು? ಎಂಬ ವಿಚಾರವು ಕನ್ನಡಿಗರಲ್ಲಿ ಬರಬಹುದು. ಹೊಸ ಗ್ರಂಥಗಳು ತಲೆಯೆತ್ತಿದರೂ ಪಂಪ, ರನ್ನನ ಕವಿತೆಗಳ ಮೇಲಣ ಅಭಿಮಾನವು ಕುಂದಿಹೋಗಿಲ್ಲ. ನೂತನ ಗ್ರಂಥಗಳ ವಾಚನದ ಅಭಿರುಚಿಯು ಹುಟ್ಟಿದೊಡನೆ, ಹೆಚ್ಚಿದೊಡನೆ, ಹಳೆಯ ಗ್ರಂಥಗಳಲ್ಲಿ ಏನಾದರೂ ಹುರುಳಿದೆಯೇ ಎಂದು ಪರಿಶೋಧನೆ ಮಾಡುವ ಕುತೂಹಲವು ಸಾಮಾನ್ಯವಾಗಿ ಸಾಹಿತಿಗಳಿಗೆ ಬರುತ್ತದೆ. ಹಾಗೆ ಈ ಸಣ್ಣ ಕಥೆಗಳು ವೆಂಕಟಾಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳನ್ನು—ಉತ್ತಮ ಗ್ರಂಥಗಳನ್ನು— ಮೂಲೆಗೊತ್ತಿ, ಪತ್ರಿಕೆಗಳಲ್ಲಿಯೂ, ಗ್ರಂಥರೂಪವಾಗಿಯೂ ಲೆಕ್ಕವಿಲ್ಲದೆ ಹೊರಡುತ್ತಿರುವಾಗ, ಇಂಥ ಕಥೆಗಳಿಗೆ ಮೂಲ ಪುರುಷನು ಯಾರು? ಎಂಬ ತರ್ಕವು ತನ್ನಂತೆ ಬಂದೇ ಬರುವುದು. ಇಂಥ ವಿಚಾರದಲ್ಲಿ, ಪಶ್ಚಿಮ ಘಟ್ಟಗಳ ಅಡ್ಡಗೋಡೆಯ ಪೂರ್ವಕ್ಕಿರುವ ಕನ್ನಡ ಪ್ರದೇಶಗಳಲ್ಲಿ ಪರಿಶೋಧನೆ ಮಾಡಿದವರು ಇಂಥ ಕಥೆಗಳಿಗೆ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರರೇ ಮೂಲಪ್ರುರುಷರು, ಪಿತೃಸಮಾನರು ಎಂದು ಪರಿಗಣಿಸಿದ್ದಾರೆ. ಶ್ರೀಯುತರ ಮನೋರಂಜಕವಾದ ಕಥೆಗಳ ಮೇಲೆ ನಮಗೆ ತುಂಬ ಅಭಿಮಾನವಿದೆ. ಆದರ ಗೌರವಗಳಿವೆ. ಆದರೆ ಇವರು ಇನ್ನೂ ವಿದ್ಯಾರ್ಥಿ ದಶೆಯಲ್ಲಿಯೇ ಇರುವಾಗ ನಮ್ಮ ಜಿಲ್ಲೆಯಲ್ಲಿ ಸಮಾರು ೩೪ ವರ್ಷಗಳ ಹಿಂದೆ ಶ್ರೀಮಾನ್ ಬಿ. ವಿಠ್ಠಲ ರಾವ್ (ಕಂಠೀರವ ಸಂಪಾದಕ) ಇವರು ಮಾಲಕರಾಗಿಯೂ, ಶ್ರೀಮಾನ್ ಬೆನೆಗಲ್ ರಾಮರಾವ್, ಎಂ. ಎ, ಎಲ್. ಎಲ್. ಬಿ. ಮದ್ರಾಸ್ ಸರಕಾರದ ನಿವೃತ್ತ ಟ್ರಾನ್ಸ್‌ಲೇಟರ್, ಇವರು. ಸಂಪಾದಕರಾಗಿಯೂ ಹೊಡುತ್ತಿದ್ದ "ಸುವಾಸಿನಿ" ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಈ ಕಥಾ ಸಂಗ್ರಹವು, ಪಶ್ಚಿಮ ಘಟ್ಟಗಳ

ಅಡ್ಡಗೋಡೆಯೆ ಹಿಂದೆ ಇದ್ದವರ ದೃಷ್ಟಿಗೆ ಬೀಳದಿದ್ದುದು ಆಶ್ಚರ್ಯವಲ್ಲ! ಆದರೂ ಈ ಕಥೆಗಳು ಈ ಶತಮಾನದ ಆದಿಯಲ್ಲಿಯೇ ಅಚ್ಚಾಗುತಿದ್ದ “ಸುವಾಸಿನಿ” ಮಾಸ ಪತ್ರಿಕೆಯಲ್ಲಿ ಬೆಳಕನ್ನು ಕಂಡುವು. ಕಾರಣಾಂತರದಿಂದ ಅವುಗಳ ಆಸ್ತಿಕ್ಯದ ಮರವೆಯಾಗಿದ್ದರೂ, ಶ್ರೀಮಾನ್ ಪಂಜೆ ಮಂಗೇಶರಾಯರ ಈ ಐತಿಹಾಸಿಕ ಕಥೆಗಳು ಕರ್ಣಾಟಕದ ಜನರಲ್ಲಿ ವಿಶೇಷವಾದ ಮನೋರಂಜನೆಯನ್ನು ಮಾಡಿವೆ. ಇವರ ಹಾಸ್ಯಗರ್ಭಿತವಾದ “ಭಾರತ ಶ್ರವಣ” “ನನ್ನ ಚಿಕ್ಕಪ್ಪ” “ನನ್ನ ಚಿಕ್ಕತಾಯಿ” “ನನ್ನ ಹೆಂಡತಿ” ಮಂತಾದ ಹಲವು ಕಥೆಗಳ ವಾಚಕರಲ್ಲಿ ತುಂಬ ವಿನೋದವನ್ನು ಹುಟ್ಟಿಸುತ್ತಿದ್ದುವು. ಇವನ್ನೆಲ್ಲ ಗ್ರಂಥರೂಪವಾಗಿ, ಒಮ್ಮೆ ಪ್ರಕಟಿಸಬೇಕೆಂದು ಆಸೆಯು ನಮ್ಮಲ್ಲಿ ಎಂದೋ ಮೂಡಿತ್ತು. ಆದರೆ ವಿನಯಪರರಾದ ಶ್ರೀಮಾನ್ ಮಂಗೇಶರಾಯರು ಇದಕ್ಕೆಲ್ಲ ಸಮ್ಮತಿಸದೆ “ಬೇಡ ಬೇಡ”ವೆಂದೇ ನಮ್ಮ ಕೈತಡೆದರು. ಆದ್ದರಿಂದ ಈ ಮೊದಲೇ ಇದನ್ನು ಪ್ರಕಟಿಸಲಾಗಲಿಲ್ಲ. ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ಶ್ರೀಮಾನ್ ಪಂಜೆ ಮಂಗೇಶರಾಯರು ಆರಿಸಲ್ಪಟ್ಟ ಕಾಲದಲ್ಲಿಯಾದರೂ ಈ ಕಥೆಗಳನ್ನು ಪ್ರಕಟಿಸಬೇಕೆಂದು ನಮ್ಮಲ್ಲಿ ಇನ್ನೊಮ್ಮೆ ಉತ್ಸಾಹವು ತಲೆದೋರಿತು. ಆದರೆ 'ಸುವಾಸಿನಿ'ಯ ಹಳೆಯ ಸಂಚಿಕೆಗಳು ದೊರಕುವುದೇ ಕಷ್ಟವಾದುದರಿಂದ, ಇವನ್ನು ಪ್ರಕಟಿಸುವುದಕ್ಕೆ ಇಷ್ಟು ವಿಳಂಬವಾಯಿತು. ಆದರೆ ಈಗಲೂ ಇದನ್ನು ಪ್ರಕಟಿಸಲಿಕ್ಕೆ ಶ್ರೀ| ಮಂಗೇಶರಾಯರು ಒಪ್ಪಲಾರರು ಎಂಬ ಸಂದೇಹ ಬಂದುದರಿಂದ, ಅವರ ಅಪ್ಪಣೆ ಕೇಳದೆಯೇ ಪ್ರಕಟಿಸಿದ್ದಕ್ಕಾಗಿ ಅವರ ಕ್ಷಮಾಪಣೆಯನ್ನು ಬೇಡುತ್ತೇವೆ.

ಕನ್ನಡಿಗರ ಯಥೋಚಿತ ಪ್ರೋತ್ಸಾಹದೊಂದಿಗೆ, ಶ್ರೀಮಾನ್ ಪಂಜೆಯವರ “ಸುವಾಸಿನಿ”ಯ ಇತರ ಕಥೆಗಳನ್ನೂ ಪ್ರಕಟಿಸಬೇಕೆಂಬ ಉದ್ದೇಶವಿದೆ. ಕನ್ನಡಿಗರು ನೆರವಾಗಲಿ.

# ಶ್ರೀ| ಪಂಜೆ ಮಂಗೇಶರಾಯರ ಜೀವನಚರಿತ್ರೆ

ಇವರು ಕ್ರಿ. ಶ. ೧೮೭೪ರಲ್ಲಿ ಬಂಟವಾಳದಲ್ಲಿ ಜನ್ಮವೆತ್ತಿದರು. ಇವರು ಬಹಳ ಬಡ ಕುಟುಂಬದಲ್ಲಿ ಹುಟ್ಟಿದುದರಿಂದ ಬಾಲ್ಯದಿಂದಲೂ ಇವರಿಗೆ ಬಡಪತ್ತಿನ ಕಷ್ಟ ಸಂಕಷ್ಟಗಳೆ ತುಂಬಾ ಪರಿಚಯವಿತ್ತು. ೯ ಜನ ಅಣ್ಣತಮ್ಮಂದಿರಲ್ಲಿ ಇವರು ಎರಡನೆಯವರಾದರೂ ಇವರ ಬಡ ತಂದೆಯು ಬೇಗನೆ ಮಡಿದುದರಿಂದ ಇವರು ಬಿ. ಎ. ಪಾಸು ಮಾಡುವ ಮೊದಲೆ ಕುಟುಂಬಸಂರಕ್ಷಣೆ ಮತ್ತು ತಮ್ಮಂದಿರ ವಿದ್ಯಾಭ್ಯಾಸದ ಭಾರವು ಇವರ ಮೇಲೆ ಬಿತ್ತು. ಇವರ ಹಿರಿಯಣ್ಣನು ಬಿ. ಎ. ಪಾಸು ಮಾಡಿದೊಡನೆ ದಕ್ಷಿಣ ಮಹಾರಾಷ್ಟ್ರದಲ್ಲಿ ಕಲೆಕ್ಟರ ಅಥವಾ ಡಿಪ್ಯುಟಿ ಕಮ್ಮಿಶನರ ಕಚೇರಿಯಲ್ಲಿ ಗುಮಾಸ್ತರಾದರು. ಇವರ ಕಡಿಮೆ ಸಂಬಳದಿಂದ ಕುಟುಂಬ ಸಂರಕ್ಷಣೆ ಸಾಧ್ಯವಾಗಲಿಲ್ಲ. ಶ್ರೀ| ಮಂಗೇಶರಾಯರು ಹೀಗಾಗಿ ಗಣಿತವನ್ನು ತೆಗೆದುಕೊಂಡು ಬಿ. ಎ. ಪರೀಕ್ಷೆಗೆ ಮದ್ರಾಸಿಗೆ ಹೋಗಲಾರದೆ ಚರಿತ್ರೆಯನ್ನು ಐಚ್ಛಿಕವಾಗಿ ತೆಗೆದುಕೊಂಡು ಮಂಗಳೂರಿನ ಸ್ಯೆಂಟ್ ಎಲೊಯ್ಸಿಯಸ್ ಕೊಲೇಜಿನಲ್ಲಿ ಇಂಗ್ಲೀಷ ಮತ್ತು ಕನ್ನಡ ಶಾಖೆಗಳಲ್ಲಿ ಪಾಸುಮಾಡಿ ಮಂಗಳೂರಿನ ಗವರ್ನಮೆಂಟ ಕೊಲೇಜಿನಲ್ಲಿ ಬರೆ ೨೦ ರೂಪಾಯಿ ತಲಬಿನ ಮೇಲೆ ಕನ್ನಡ ಪಂಡಿತರಾಗಿ ಸೇರಿದರು. ಕುಟುಂಬದ ಉದರ ನಿರ್ವಾಣಕ್ಕೆ ಇವರು ವಿದ್ಯಾರ್ಥಿಗಳಿಗೆ ಗಣಿತ ಇತ್ಯಾದಿಗಳನ್ನು ಖಾಸಗಿ ಕಲಿಸತೊಡಗಿದರು. ಅವರ ಆಗಿನ ನೂತನ ರೀತಿಗಳನ್ನು ಈಗಲೂ ಅವರ ವಿದ್ಯಾರ್ಥಿಗಳು ಸ್ಮರಿಸುತ್ತಾರೆ. ಹೀಗಾಗಿ ಸಾಧಾರಣವಾಗಿ ದಿನಕ್ಕೆ ೧೬ ತಾಸುಗಳಷ್ಟು ಕಾಲ ದುಡಿಯಬೇಕಾಯಿತು. ಇವರು ಕನ್ನಡವನ್ನು ಕಲಿಸತೊಡಗಿದೊಡನೆ ಹಳೆ ರೀತಿಯಲ್ಲಿ ಕಾವ್ಯ ಓದುವ ಕ್ರಮವು ಬಿದ್ದು ಹೋಗಿ ರಾಗಯುಕ್ತವಾಗಿ ಓದಲು ಪ್ರಾರಂಭವಾಗಿ ಕನ್ನಡ ಕಲಿಯುವವರಿಗೆ ಹೊಸಹುರುಪು ಬಂತು. ಅವರು ವಿದ್ಯಾರ್ಥಿಯಾಗಿರುವಾಗಲೂ ವಿಕಟ ಕವಿತ್ವವನ್ನು ಕುಳಿತಲ್ಲೆ ಮಾಡುತಿದ್ದುದರಿಂದ ಯಾವ ಕೂಟದಲ್ಲಿಯೂ ಮನೋರಂಜನೆಯನ್ನು

ಮಾಡುತಿದ್ದರು. ಈ ಕಾಲದಲ್ಲಿ ಕೊಂಕಣಿಯಿಂದ ಒಂದೆರಡು ನಾಟಕಗಳೂ ಹಾಡುಗಳೂ ಮನರಂಜನೆ ಮಾಡುವುದನ್ನು ನೋಡಿ ನೂತನ ಕವಿತ್ವನನ್ನು ಬರೆಯಬೇಕೆಂಬ ಕುತೂಹಲವು ಇವರಲ್ಲಿ ಉಂಟಾಯಿತು. ಇವರ ಮೆದುಳಿನ ಸಾಮರ್ಥ್ಯವು ಬಹಳ ಚೆನ್ನಾಗಿದ್ದುದರಿಂದ ಇವರಿಗೆ ಓದಿದ ಯಾವ ಭಾಗವೂ ಥಕ್ಕನೆ ಬಾಯಿಪಾಠವಾಗುತಿತ್ತು. ಹೀಗಾಗಿ ಇವರು ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ತೊರವೆಯ ರಾಮಾಯಣ ಇತ್ಯಾದಿಗಳನ್ನು ಓದಿ ಹಲವಂಶವನ್ನು ಬಾಯಿಪಾಠವಾಗಿ ಹೇಳುತ್ತಿದ್ದರು. ಇದರೊಂದಿಗೆ ಹಳೆಗನ್ನಡದ ಅಭ್ಯಾಸವೂ ಇವರಿಗೆ ಚೆನ್ನಾಗಿ ಆಯಿತು.

ಇವರು ೧೯೦೨ರಲ್ಲಿ ಬಿ. ಎ. ಪಾಸು ಸಂಪೂರ್ಣವಾಗಿ ಮಾಡಿ ಸೈದಾಪೇಟೆಯ ಟ್ರೈನಿಂಗ್ ಕೊಲೇಜಿನಲ್ಲಿ ಆರೇ ತಿಂಗಳು ವ್ಯಾಸಂಗ ಮಾಡಿ ಎಲ್. ಟಿ. ಪರೀಕ್ಷೆಯನ್ನು ೧೯೦೫ರಲ್ಲಿ ಮುಗಿಸಿದರು. ಗವರ್ನಮೆಂಟ ಕೊಲೇಜಿನಲ್ಲಿ ಕೆಲವು ತಿಂಗಳು ಅಧ್ಯಾಪಕರಿದ್ದಾಗಲೇ, ಇವರಿಗೆ ಹೊಸತಾಗಿ ಏರ್ಪಟ್ಟ ಮಂಗಳೂರು ರೇಂಜಿನ ಡೆಪ್ಯುಟಿ ಇನ್ಸ್‌ಪೆಕ್ಟರರಾಗಿ (ಆಗ ಸಬ್ ಅಸಿಸ್ಟಾಂಟ ಇನ್ಸ್‌ಪೆಕ್ಟರರು) ನೇಮಕವಾಯಿತು. ಅವರ ಭಾಷಾನುಭವ, ಶಿಕ್ಷಣಜ್ಞಾನಗಳನ್ನು ಪರಿಶೀಲಿಸಿ ಮನಗಂಡ ಮಿ. ಪಿ. ಪಿ. ಬ್ರೆತ್‌ವೈಟ್ (ಶಾಲಾ ಇನ್ಸ್‌ಪೆಕ್ಟರ)ರ ಸಹಾಯದಿಂದ ಇವರಿಗೆ ಮಿ. ಇ. ಮಾರ್ಸಡೆನರ ಪರಿಚಯವಾಯಿತು. ಇವರು ಬಾಸೆಲ್ ಮಿಶ್ಯನಿಗೋಸ್ಕರ ಒಂದೆರಡು ರೀಡರುಗಳನ್ನು ತಯಾರಿಸಿದ್ದನ್ನು ಕಂಡು ಮಾರ್ಸಡೆನರು ಇವರನ್ನು ತಮ್ಮ ಕೈಕೆಳಗೆ ಮೆಕಮಿಲ್ಲನ್ ಕಂಪೆನಿಯ ರೀಡರುಗಳನ್ನು ಬರೆಯುವುದಕ್ಕೆ ಪ್ರೋತ್ಸಾಹಿಸಿದರು. ಆಗ ಇವರಿಗೆ ಹಳೆ ರೀಡರು, ಹಳೆ ಕಾವ್ಯಪುಂಜ ಇತ್ಯಾದಿಗಳಲ್ಲಿ ಇರುವ ಪದ್ಯಗಳು ಎಷ್ಟರ ಮಟ್ಟಿಗೆ ಚಿಕ್ಕ ಮಕ್ಕಳಿಗೆ ಉಕ್ಕಿನ ಕಡಲೆಗಳು ಆಗಿವೆ ಎಂಬ ಭಾವನೆಯು ಮೂಡಿತ್ತು. ಮೈಸೂರಿನ ಪದ್ಯಸಾರವೂ ಅವರಿಗೆ ರುಚಿಸಲಿಲ್ಲ; ಆಗ ಇವರೇ ಚಿಕ್ಕ ಕಾವ್ಯಗಳನ್ನು ಬರೆದು ಹಾಡುತಿದ್ದರು. ಅದಕ್ಕಿಂತ ಮೊದಲೆ 'ಸುವಾಸಿನಿ'ಯ ಪ್ರಮುಖ ಲೇಖಕರಾಗಿದ್ದ ಇವರ ಚಿಕ್ಕ ಹಾಡುಗಳೂ ಹಾಸ್ಯಮಯವಾದ ಚಿಕ್ಕ ಕಥೆಗಳೂ (ನನ್ನ ಚಿಕ್ಕತಾಯಿ, ಚಿಕ್ಕಪ್ಪ, ಭಾರತ ಶ್ರವಣ ಇತ್ಯಾದಿ ಭಾರತ ಸ್ತ್ರೀರತ್ನಗಳನ್ನು ಕುರಿತು ಚಿಕ್ಕ ಕಾದಂಬರಿಗಳೂ

ಹೊರಬಿದ್ದಿದ್ದುವು. (ದುರ್ಗಾವತಿ, ಶೈಲಿನಿ ಇತ್ಯಾದಿ). 'ಸುವಾಸಿನಿ' ಬಿದ್ದುಹೋದ ಅನಂತರ ಇವರ ಅನುಕರಣದಿಂದಲೇ ದಕ್ಷಿಣ ಮಹಾರಾಷ್ಟ್ರದಲ್ಲಿ ಚಿಕ್ಕದೊಂದು ಮಾಸಿಕ ವಹಿಯು ಹೊರಟಿತು. ಆದರೆ ಸಾಕಷ್ಟು ಪ್ರೋತ್ಸಾಹ ಸಿಗದೆ ಅದೂ ಬಿದ್ದುಹೋಯಿತು. 'ಶ್ರೀನಿವಾಸ'ರು ಇನ್ನೂ ವಿದ್ಯಾರ್ಥಿಗಳಾಗಿರುವಾಗಲೇ ಈ ಚಿಕ್ಕ ಕಥೆಗಳು ಹೊರಬಿದ್ದುದರಿಂದ ಶ್ರೀ| ಮಂಗೇಶರಾಯರೇ ಇಂಥ ಸಾಹಿತ್ಯದ ಪಿತಾಮಹರೆಂದು ಹೇಳಬಹುದಾಗಿದೆ. ಅನಂತರ ಅವರು ಬರೆದ ಚಿಕ್ಕ ಕಾವ್ಯಗಳು 'ಕವಿಶಿಷ್ಯ' ಎಂಬ ಹೆಸರಿನಿಂದ ಬಾಸೆಲ ಮಿಶ್ಯನಿನವರ ಒಂದನೆ, ಎರಡನೆ, ಮೂರನೆ ಪದ್ಯಪುಸ್ತಕಗಳಲ್ಲಿ ಪ್ರಕಟವಾಗಿವೆ. ತಮ್ಮ ಕಾವ್ಯವನ್ನು ತಾವೇ ಶಾಲೆಗಳಲ್ಲಿ ಪ್ರಚಾರಮಾಡುವುದು ಶ್ರೀ| ಮಂಗೇಶರಾಯರಿಗೆ ಅನುಚಿತವಾಗಿ ಕಂಡಿತು. ಹೀಗಾಗಿ ವ್ಯಾಪಾರದೃಷ್ಟಿಯಿಂದ ನೋಡಿದರೆ, ಅದರ ಅನಂತರ ಹೊರಟ ನೂರಾರು ಪದ್ಯಪುಸ್ತಕಗಳು ಪಠ್ಯಪುಸ್ತಕವಾಗಿ ಸಾವಿರಗಟ್ಟಳೆಯಿಂದ ಮಾರಾಟವಾಗಿದ್ದರೂ ಈ ಮೂರು ಪುಸ್ತಕಗಳ ಸ್ಥಾನದಲ್ಲಿ ಇದುವರೆಗೆ ನಿಲ್ಲಲಿಲ್ಲವಂಬುದು ಖಂಡಿತ. ಆ ಪದ್ಯಗಳ ಹುರುಳೇನೆಂದು ತಿಳಿಯದೆ "ಹಾವೊಳು ಹೂವೆ ಹೂವೊಳು ಹಾವೇ! ಏನು ಪದ್ಯಗಳಿವು" ಎಂದು ಹೊಟ್ಟೆ ಉರಿಯಿಂದ ಮೊರೆ ಸುರುಳಿ ಮಾಡಿ ನಕ್ಕವರುಂಟು. ಅಂಥವರಿಗೆ ಮಕ್ಕಳ ಹೃದಯದ ಪರಿಚಯವೇ ಇಲ್ಲವೆಂಬುದೊಂದು ವಿಷಾದ.

ಶ್ರೀ। ಮಂಗೇಶರಾಯರು ಮಹಾಕಾವ್ಯಗಳನ್ನು ಬರೆಯುವ ಹವ್ಯಾಸಕ್ಕೆ ಹೋಗಲಿಲ್ಲ. ಅದಕ್ಕೆ ಬೇಕಾದ ಪ್ರತಿಭೆಯು ಅವರಿಗಿದ್ದಿಲ್ಲವೆಂತಲ್ಲ. 'ಅದು ನಿಷ್ಕಾರಣವಾಗಿ ದುರ್ವ್ಯಯ ಮಾಡುವ ಕಾಲ, ಅದನ್ನು ಸದುಪಯೋಗಪಡಿಸಬೇಕೆಂ'ದು ಅವರ ಅಂಬೋಣ. ಕುಮಾರವ್ಯಾಸ ಭಾರತದಿಂದ ಅವರು ಹೆಕ್ಕಿದ 'ಕರ್ಣ ಚರಿತ', ಜೈಮಿನಿ ಭಾರತದಿಂದ ತೆಗೆದ 'ಚಂದ್ರಹಾಸನ ಕಥೆ' ಇವು ಈ ಎರಡು ಉದ್ಗ್ರಂಥಗಳ ಸವಿಯನ್ನು ಮಕ್ಕಳಿಗೆ ಹತ್ತಿಸಲಿಕ್ಕೆ ಅನುಕೂಲವಾಗಿವೆ. ಚಿಕ್ಕ ಮಕ್ಕಳಲ್ಲಿ ಯಾವ ಕಾವ್ಯವು ಮನೋರಂಜಕವಾಗುತ್ತದೆಂದು ಚೆನ್ನಾಗಿ ಶೋಧಿಸಿ ಸಾಹಸಮಾಡಿದವರಲ್ಲಿ ಅವರು ಅಗ್ರಗಣ್ಯರೆಂದು ಕಂಠೋಕ್ತವಾಗಿ ಹೇಳಿದರೆ ಯಾರೂ

ಅಸೂಯೆಸಡಲು ಕಾರಣವಿಲ್ಲ. ಇಡೀ ಕರ್ಣಾಟಕದಲ್ಲಿ ಇವರು ಈ ವಿಷಯದಲ್ಲಿ ಅಪ್ರತಿಮರು, ಕನ್ನಡವು ಮಾತ್ರ ಭಾಷೆಯಲ್ಲದ ಈ ಜಿಲ್ಲೆಯಲ್ಲಿ ಕನ್ನಡದ ಮೇಲೆ ಅಭಿಮಾನ ಹುಟ್ಟಿಸಿ, ಹಳ್ಳಿಪಳ್ಳಿಗಳಲ್ಲಿ ಸರ್ಕೀಟು ಬೆಳೆಯಿಸುವಾಗ ಅಲ್ಲಲ್ಲಿ ಕನ್ನಡ ಓದಿದವರ ಪರಿಚಯ ಮಾಡಿಕೊಂಡು, ಅವರೊಡನೆ ಹಳೇ ಕಾವ್ಯಗಳ ನಿಜವಾದ ವೈಶಿಷ್ಟ್ಯವೇನು, ಈ ಕಾಲಕ್ಕೆ ತಕ್ಕ ಸಾಹಿತ್ಯವು ಹೇಗಿರಬೇಕು, ಸಾಯಬಾರದ ಸಾಹಿತ್ಯವೆಂದರೆ ಅದರ ಲಕ್ಷಣಗಳೇನಿರಬೇಕು ಎಂದು ನಿರ್ದಾಕ್ಷಿಣ್ಯದಿಂದ ಚರ್ಚಿಸುವ ಸಾಹಸ ಮಾಡಿದವರಲ್ಲಿ ಇವರೇ ಮೊದಲಿಗರೆಂದು ದಕ್ಷಿಣ ಕನ್ನಡದವರು ಇವರ ಉಪಕಾರ ಸ್ಮರಣೆ ಮಾಡಬೇಕಾಗಿದೆ. ಇವರು ಈ ಆಧುನಿಕ ಸಾಹಿತ್ಯವನ್ನು ಸಾಧ್ಯವಿದ್ದ ಮಟ್ಟಿಗೆ ಎತ್ತಿಹಿಡಿಯಬೇಕು ಎಂದು ಯತ್ನಿಸುವಾಗ, ಸಂಪ್ರದಾಯವಾದಿಗಳೂ ಪೂರ್ವ ಕವಿಗಳ ಮೇಲೆ ಅಂಧಭಕ್ತಿಯುಳ್ಳವರೂ ಇವರ ವಿಕಾಸವಾದವನ್ನು ಖಂಡಿಸಿ, ಇವರು ಆಧುನಿಕ ಗ್ರಂಥಗಳ ಅಂಧಭಕ್ತರು ಎಂದು ಭಾವಿಸುತ್ತಾರೆ. ಅದರೆ ಇವರಿಗೆ ಪ್ರಾಚೀನ ಕವಿಗಳ ಮೇಲೆ ಅಭಿಮಾನವೇನೂ ಕಡಿಮೆಯಿಲ್ಲ. ಎಲ್ಲಾ ಪ್ರಾಚೀನ ಕವಿಗಳು ವಂದ್ಯರು, ಎಲ್ಲಾ ಆಧುನಿಕ ಕವಿಗಳು ನಿಂದ್ಯರು ಎಂಬ ಈ ತೀರ್ಮಾನಕ್ಕೆ ಮಾತ್ರ ಇವರು ಬಗ್ಗುವುದಿಲ್ಲ. ಸಾಹಿತ್ಯವು ಉಳಿಯಬೇಕಾದರೆ ಅದು ಬೆಳೆಯಬೇಕು; ಇದಕ್ಕೆ ತೀರಾ ಸಂಸ್ಕೃತದ ಬೆಂಬಲವೇ ಸಾಲದು, ಆಧುನಿಕ ಸಂಸ್ಕೃತಿಯ ಭಾಷೆಗಳೆ ವರ್ಚಸ್ಸು ಕನ್ನಡದ ಮೇಲೆಯೂ ಬೀಳಬೇಕು; ಇದು ಭಾವಿ ಬೆಳವಣಿಗೆಗೆ ನೈಸರ್ಗಿಕವಾದ ಮಾರ್ಗ ಎಂಬುದು ಇವರ ಪ್ರತಿಪಾದನೆ.

ಇವರ ಅಪ್ರತಿಮವಾದ ಶಿಕ್ಷಣ ಪರಿಚಯದ ಪರಿಣಾಮವಾಗಿ ಹುಟ್ಟಿದ ’ಮಕ್ಕಳ ಕಥಗಳು’ ಮಾತೃಭಾಷೆ ಕನ್ನಡವಲ್ಲದ ಮಕ್ಕಳಿಗೆ ಕನ್ನಡವನ್ನು ಹೇಳಿಕೊಡುವುದಕ್ಕೆ ಸುಗಮವಾದ ದಾರಿಯೆಂಬುದು ಸ್ವಯಂ ಸಿದ್ಧವಾಗಿದೆ.

ಹೀಗಾಗಿ ಉದ್ಗ್ರಂಥಗಳನ್ನು ಬರೆಯುವವರ, ಬರೆದವರ, ಸಾಲಿನಲ್ಲಿ ನಿಲ್ಲಲು

ಯೋಗ್ಯತೆಯುಳ್ಳವರೆಂದು ಭಾವಿಸಲು ಇವರು ಎಡೆಕೊಡದಿದ್ದರೂ ನ್ಯಾಯವಾದ ಮತ್ತು ಸಕಾರಣವಾದ ಟೀಕೆ ಎಂದರೇನು, ಉತ್ತಮ ಕಾವ್ಯವೆಂದು ಯಾವುದನ್ನು ಎನ್ನಬೇಕು ಎಂಬುದನ್ನು ಸರಿಯಾಗಿ ಮಂದಟ್ಟು ಮಾಡಿಸಿ, ಉತ್ತಮ ಗ್ರಂಥಗಳು ಹುಟ್ಟುವುದಕ್ಕೆ ಸೂಲಗಿತ್ತಿಯ ಸ್ಥಾನದಲ್ಲಿದ್ದಾರೆಂದರೆ ಅವರ ಪರಿಚಯವಿದ್ದವರೆಲ್ಲರೂ ಒಪ್ಪಬೇಕಾಗಿದೆ. ಈ ರೀತಿಯ ಪ್ರಚಾರಕಾರ್ಯದ ದೆಸೆಯಿಂದ ಅವರ ಹೆಸರು ಅಖಿಲ ಕರ್ನಾಟಕದಲ್ಲಿ ಉಜ್ವಲವಾಗಿ ಬೆಳಗಿದೆ. ಅವರು ಆಜನ್ಮಭೋಧಕರು. ಯಾವುದೊಂದು ವಿಷಯವನ್ನೂ ಸುಲಭ ರೀತಿಯಲ್ಲಿ ಬೋಧಿಸುವುದಕ್ಕೆ ಯೋಗ್ಯತೆಯುಳ್ಳವರು. ಅವರ ಪ್ರಚಾರಕಾರ್ಯದ ಪರಿಣಾಮವು ಕನ್ನಡ ಸಾಹಿತ್ಯದ ಏಳ್ಗೆಯಲ್ಲಿ ಚಿರಸ್ಥಾಯಿಯಾಗಿ ನಿಲ್ಲುವುದೆಂಬದರಲ್ಲಿ ಸಂದೇಹವಿಲ್ಲ.

ಇವರ ವಿದ್ವತ್ತೆಯ ಪರಿಚಯ, ಇವರ ರಸಭರಿತವಾದ ಮತ್ತು ವಿನೋದಕರ ಸಂಭಾಷಣೆ ಇವುಗಳಿಂದ ಮೈಸೂರು, ದಕ್ಷಿಣ ಮಹಾರಾಷ್ಟ್ರಗಳಲ್ಲಿರುವ ಕನ್ನಡ ಸಾಹಿತಿಗಳ ಸ್ನೇಹವು ಅವರಿಗೆ ಆದದ್ದಲ್ಲದೆ, ಅವರ ಶಿಕ್ಷಣ ಸಾಮರ್ಥ್ಯವನ್ನು ಗೊತ್ತು ಹಚ್ಚಿದ ಧಾರವಾಡ ಜಿಲ್ಲೆಯ ಶಾಲಾ ಇನ್ಸ್‌ಪೆಕ್ಟರರಾಗಿದ್ದ ಮಿ. ವಕೀಲರ ಪ್ರಯತ್ನದಿಂದ ಜರುಗಿದ ಉಪಾಧ್ಯಾಯರ ಸಮ್ಮೇಲನದಲ್ಲಿ ಇಂಗ್ಲಿಷು, ಗಣಿತ, ಮುಂತಾದ ವಿಷಯಗಳಲ್ಲಿ ಮಾದರಿ ಪಾಠಗಳನ್ನು ಶ್ರೀಯುತ ಪಂಜೆ ಮಂಗೇಶರಾಯರಿಂದ ಕೊಡಿಸಿ ಪ್ರಾಥಮಿಕ ಉಪಾಧ್ಯಾಯರಲ್ಲಿ ಹೊಸ ಹುರುಪು ಬರುವಂತೆ ಮಾಡಲಾಯಿತು.

ಹಾಗೆಯೆ, ಹಿಂದೆ ಎರಡು ಮೂರು ಸಲ ಬಂದ ಆಮಂತ್ರಣವನ್ನು ಶ್ರೀ| ಮಂಗೇಶರಾಯರು ತಮ್ಮ ಸ್ವಾಭಾವಿಕವಾದ ವಿಷಯದಿಂದ ಅಂಗೀಕರಿಸದೆ ಇದ್ದರೂ ರಾಯಚೂರಿನಲ್ಲಿ ಜರುಗಿದ ಇಪ್ಪತ್ತನೆಯ ಕರ್ನಾಟಕ ಪರಿಷತ್ತಿನ ಅಧಿವೇಶನದಲ್ಲಿ ಹಲವು ಕನ್ನಡ ಸಾಹಿತಿಗಳ ಒತ್ತಾಯದಿಂದ ಅವರು ಅಧ್ಯಕ್ಷಸ್ಥಾನವನ್ನು ಅಂಗೀಕರಿಸಿದರು. ಮತ್ತು ಅಲ್ಲಿ ಅವರು ಕೊಟ್ಟ ಅಧ್ಯಕ್ಷ ಭಾಷಣವು ಕನ್ನಡ ಸಾಹಿತ್ಯದ ದಿಗ್ದರ್ಶನ ಮಾಡುವುದರಲ್ಲಿ ಅಪೂರ್ವವಾಗಿತ್ತು ಎಂದು ಕನ್ನಡಿಗರೆಲ್ಲರ ಅಭಿಪ್ರಾಯ.

ಇವರು ಮದ್ರಾಸು ಯುನಿವರ್ಸಿಟಿಯ ಕನ್ನಡ ಬೋರ್ಡಿನಲ್ಲಿ ಪ್ರಮುಖ ಮೆಂಬರರಾಗಿದ್ದು, ಪಠ್ಯಪುಸ್ತಕಗಳಲ್ಲಿ ಆಧುನಿಕ ಗ್ರಂಥಗಳಿಗೆ ನ್ಯಾಯವಾದ ಸ್ಥಾನ ಸಿಗುವಂತೆ ಸಾಹಸಮಾಡುತ್ತಿರುವರಲ್ಲದೆ, ಮೈಸೂರು ಯುನಿವರ್ಸಿಟಿಯವರು ಇತ್ತಲಾಗೆ ಮೈಸೂರು ಯುನಿವರ್ಸಿಟಿಯ ಕನ್ನಡ ಬೋರ್ಡಿನಲ್ಲಿ ಇವರಿಗೆ ಸ್ಥಾನ ಕೊಟ್ಟಿರುವರು. ಮತ್ತು ಕುಮಾರವ್ಯಾಸನ ಭಾರತವನ್ನು ಕಥಾಭಾಗವೂ ಕವಿಯ ಚಮತ್ಕೃತಿಯೂ ತೋರಿಬರುವಂತೆ ಸಂಕ್ಷೇಪಿಸಿ ಬರೆಯುವುದಕ್ಕೆ ಇವರನ್ನು ಎಡಿಟರರಾಗಿ ನಿಯಮಿಸಿದ್ದಾರೆ. ಅನಂತಪುರ, ಬಳ್ಳಾರಿ ಜಿಲ್ಲೆಗಳಲ್ಲಿ ಇವರು ಪರ್ಯಟನ ಮಾಡುತ್ತಿರುವಾಗ ಇವರಿಂದ ಕನ್ನಡ ಸಾಹಿತ್ಯದ ವಿಚಾರಗಳನ್ನು ಕುರಿತು ಭಾಷಣಗಳನ್ನು ಕೊಡಿಸಿ ಕನ್ನಡಿಗರಲ್ಲಿ ಸಾಹಿತ್ಯಾಭಿಮಾನವು ಕಳೆಯೇರುವುದಕ್ಕೆ ಪ್ರಯತ್ನಿಸಿದ್ದಾರೆ.

ಈ ಸುಪ್ರಸಿದ್ಧ ಸಾಹಿತಿಗಳು ಈಗ ದಿವಂಗತರಾಗಿದ್ದಾರೆ.

# ದುರ್ಗಾವತಿ

ಭರತಖಂಡದ ಪುರಾಣೇತಿಹಾಸಗಳಲ್ಲಿ ಕ್ಷಾತ್ರಧರ್ಮಾನುವರ್ತಿಗಳಾದ, ವೀರತ್ರದಿಂದ ಕೀರ್ತಿವಂತೆಯರಾದ ಮಹಿಳೆಯರು ಅನೇಕರಿರುವರು. ತೇಜಸ್ವಿನಿಯಾದ ಕೈಕಾದೇನಿಯು ರಾಕ್ಷಸರ ಸಮರಭೂಮಿಯಲ್ಲಿ ನಿಸ್ಸಹಾಯಕನಾದ ದಶರಥನ ಕಳಚಿಹೋದ ರಥಚಕ್ರದಲ್ಲಿ ತನ್ನ ಕೋಮಲ ಹಸ್ತಾಂಗುಳಿಯನ್ನು ಸಿಲುಕಿಸಿ, ತನ್ನ ವೀರಪತಿಯ ಯುದ್ಧವನ್ನು ಪೂರಯಿಸಿದಳು. ಆಗರ್ಭಶ್ರೀಮಂತೆಯಾದ ಜನಕನಂದನೆಯು ಪತಿವಿಯೋಗಕ್ಕಿಂತಲೂ ಅರಣ್ಯವಾಸವೇ ಮಧುರವೆಂದು ಭಾವಿಸಿ, 14 ವರ್ಷಗಳವರೆಗೆ ಗಟ್ಟ ಬೆಟ್ಟಗಳಲ್ಲಿ ಅಲೆದಳು. ಭಾರತ ಇತಿಹಾಸ ಕಾಲದಲ್ಲಿಯೂ ಸಂಯೋಗೀತಾ, ಪದ್ಮಿನಿ, ಕರ್ಮದೇವಿ ಮೊದಲಾದ ಅಸಂಖ್ಯಾತ ರಜಪುತ್ರ ವೀರ ರಮಣಿಯರು ಧರ್ಮಾಂಧರಾದ ಮುಸಲ್ಮಾನರನ್ನು ಯುದ್ಧದಲ್ಲಿ ಪ್ರತಿಭಟಿಸಿ, ತಮ್ಮ ಪತಿಗಳ ಆಪತ್ತುವಿಪತ್ತುಗಳನ್ನು ಪರಿಹರಿಸುವುದಕ್ಕೆ ರಣರಂಗದಲ್ಲಿ ರಕ್ತವನ್ನು ಬಸಿದರು. ಆದರೂ ಪಾಶ್ಚಾತ್ಯ ನಾಗರಿಕತೆಯನ್ನು ಹೊಂದಿ, ಸರ್ವ ವಿಷಯಗಳಲ್ಲೂ ಪಾಶ್ಚಾತ್ಯರೇ ನಮಗೆ ಬುದ್ಧಿ ಕಲಿಸುವರೆಂದು ನಂಬುವವರು ಈ ಪುರಾಣಗಳು ಕಲ್ಪಿತಕಥೆಗಳೆಂದೂ, ಈ ಪುರಾಣಸಿದ್ಧ ಸ್ತ್ರೀಯರು ಕವಿಸೃಷ್ಟಿಗಳೆಂದೂ ಅಲ್ಲಗಳೆವರು. ಅಷ್ಟೇಕೆ? ಸ್ಪಷ್ಟಾಕ್ಷರಗಳಿಂದ ಅಂಕಿಕವಾದ ಜೀಜಾಬಾಯಿ, ಅಹಲ್ಯಾಬಾಯಿ ಮೊದಲಾದ ಭಾರತ ಯುವತಿಯರ ಪ್ರಭಾಷವು ಚರಿತ್ರಕಾರನ ಅತಿಶಯೋಕ್ತಿ ಎಂದು ಇವರು ಅನುಮಾನಿಸುವರು. ಜನರ ಕಟ್ಟು ಕಥೆಗಳನ್ನಾಗಲಿ, ಕವಿಯ ಬಣ್ಣ ಮಾತುಗಳನ್ನಾಗಲಿ ನಂಬಬೇಕೆಂದು ನಾವು ಪ್ರತಿಪಾದಿಸುವುದಿಲ್ಲ. ಪುರಾಣೋಕ್ತವಾದ ವಿಷಯಗಳು ಸಟೆಯಾದರೂ ಸತ್ಯವಾದರೂ ದೋಷವಿಲ್ಲ. ಆದರೆ ಪುರಾಣಕಥನಗಳು ಸುಳ್ಳೆಂದು ಮೊದಲಿಂದ ಹಿಡಿದು ಹೋಗಿ, ಇದರಿಂದ ಭಾರತ ಇತಿಹಾಸದ ಸ್ಥಿತಿಗತಿಯನ್ನು ಪ್ರಮಾಣಿಸುವುದು ಯೋಗ್ಯವಲ್ಲ. ಪಾತಿವ್ರತ್ಯ, ಧರ್ಮಪರಾಯಣತೆ, ರಣೋತ್ಸಾಹ

ಮೊದಲಾದ ಗುಣಗಳು ಪುರಾಣಕಾಲದಲ್ಲಿ ಇಲ್ಲದೆ ಇರುತ್ತಿದ್ದರೆ, ಅವುಗಳು ಇತಿಹಾಸಕಾಲದಲ್ಲಿ ಉಜ್ವಲವಾಗಿ ಪ್ರತಿಬಿಂಬಿಸುವುದಿಲ್ಲ, ಭಾರತಭೂಮಿಯು ಮುಸಲ್ಮಾನರ ಕಠೋರ ಶಾಸನದಿಂದ ತಲ್ಲಣಿಸುತ್ತಿದ್ದಾಗ, ಈ ಗುಣಗಳು ಇನ್ನೂ ಪ್ರಭಾಮಯವಾಗಿ ಬೆಳೆಗಿದುವು.

ಪ್ರತಾಪಶಾಲಿಯಾದ ಅಕ್ಬರು ದೆಹಲಿಯ ಸಿಂಹಾಸನರೂಢನಾಗಿದ್ದನು. ಮೊಗಲ್ ಸಾಮ್ರಾಜ್ಯದ ಅರ್ಧಚಂದ್ರಾಂಕಿತವಾದ ಧ್ವಜವು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ, ಸಿಂಧೂ ನದಿಯಿಂದ ಬಂಗಾಳೆಯವರೆಗೂ ನೆರಳು ಹಾಕುತಿತ್ತು. ಪೂರ್ವದ ಅಪಘಾನ್ ರಾಜರು ಬದ್ಧ ಹಸ್ತರಾಗಿ ದಿಲ್ಲೀಶ್ವರನಿಗೆ ಕೈಮುಗಿದರು. ರಾಜಪುತ್ರರಲ್ಲಿ ಅನೇಕರು ಆವನ ದೋರ್ದಂಡ ಪ್ರತಾಪವನ್ನು ಸಹಿಸಲಾರದೆ, ಅವನ ಗದ್ದುಗೆಯ ನೆರಳಲ್ಲಿ ಮರೆಹೊಕ್ಕರು. ಅವರ ಅನೇಕ ದುರ್ಗಗಳು ಮೊಗಲರ ವಿಹಾರಸ್ಥಾನಗಳಾದುವು. ಪರಂತು ಗಢಾಮಂಡಲದ ರಾಣಿಯು ತನ್ನ ಕೊರಳನ್ನು ಅಕ್ಬರನ ಪಾಠಕ್ಕೆ ಒಡ್ಡಲಿಲ್ಲ. ಚತುರೋಪಾಯ ಸಂಪನ್ನನಾದ ಅಕ್ಬರು ಗಢಾಮಂಡಲದ ರಾಣಿಯಾದ ದುರ್ಗಾವತಿಯು ತನ್ನ ಅನುಚರಿಯಾಗುವಂತೆ, ಹಲವು ಉಪಾಯಗಳನ್ನು ಮಾಡಿದನು. ತೇಜಸ್ವಿನಿಯಾದ ದುರ್ಗಾವತಿಯ ವೀರಸಹಾಸದಿಂದ, ಅವೆಲ್ಲವೂ ಬಯಲಾಗಿ ಹೋದುವು.

ದುರ್ಗಾವತಿಯು ಮಧ್ಯಹಿಂದುಸ್ಥಾನದ ಮಹೊಬ್ಬಾ ಸಂಸ್ಥಾನದ ರಾಜನಾದ ಚಂದೇಲನ ಮಗಳು. ದುರ್ಗದ ಆಧಿದೇವತೆಯ ನಾಮಾಂಕಿತದಿಂದ ಅವಳಿಗೆ ದುರ್ಗಾವತಿ ನಿಂದು ಹೆಸರನ್ನಿಟ್ಟರು. ಕನ್ನಿಕೆಯ ಬುದ್ಧಿ ಸಂಪನ್ನತೆಯನ್ನೂ ಸೌಂದರ್ಯವನ್ನೂ ನೋಡಿ ಆನಂದಪಡುತ್ತಲಿದ್ದ ಚಂದೇಲನು, ತನ್ನ ವಂಶಕ್ಕೆ ಅನುರೂಪನಾದ ಕುಲೀನ ರಾಜಪುತ್ರ ರಾಜನಿಗೆ ಅವಳನ್ನು ಕೊಡಬೇಕೆಂದು ಮನಸ್ಸು ಮಾಡಿದ್ದನು. ದುರ್ಗಾವತಿಯು ಗಢಾಮಂಡಲದ ಗೌಡರಾಜನಾದ ದಳಪತಿಶಹನ ಸಾಹಸಕ್ಕೂ ಪರಾಕ್ರಮಕ್ಕೂ ಮುಗ್ಧಳಾಗಿ, ತನ್ನ ತಂದೆಗೆ ತಿಳಿಯದಂತೆ ಆ ವೀರನನ್ನು

ಹೃದಯದಲ್ಲಿ ವಂಸಿದ್ದಳು. ದಳಪತಿಶಹನು ಮಹಾ ಯೋಧನು; ರಾಜಕಾರ್ಯಧುರಂಧರನು; ರಾಜಪುತ್ರರಮಣಿಯರ ಮಾನ ರಕ್ಷಕನು. ದುರ್ಗಾವತಿಯು ಅಂತರಂಗದಲ್ಲಿ ತನ್ನ ಪ್ರಣಯಚಿಹ್ನವಾದ ಹೊನ್ನಿನ ತೆಂಗಾಯಿಯನ್ನು ದಳಪತಿಶಹನಿಗೆ ಕಳುಹಿಸಿದಳು. ದಳಪತಿಶಹನು ಕನ್ನಿಕೆಯ ಪ್ರೇಮಪುರಸ್ಕಾರವನ್ನು ಅತ್ಯಂತ ಶ್ರದ್ಧೆಯಿಂದ ಸ್ವೀಕರಿಸಿದನು. ಕ್ರಮೇಣ ದುರ್ಗಾವತಿಯ ಆಶೆಯು ಹೊರಬಿದ್ದಿತು. ದುರ್ಗಾವತಿಯ ತಂದೆಯು ಈ ಸಂಬಂಧವನ್ನು ಒಪ್ಪಲಿಲ್ಲ. ದಳಪತಿಶಹನು ಸಾಮಾನ್ಯ ರಾಜಪುತ್ರನೆಂದೂ, ಅವನ ರಾಜ್ಯವು ಬಲು ಚಿಕ್ಕದೆಂದೂ, ಅವನು ಅಳಿಯನಾದರೆ ತನ್ನ ಕುಲಗೌರವವು ಕಳಂಕಿತವಾಗುವುದೆಂದೂ ಭಾವಿಸಿ, ಒಂದು ಉಪಾಯವನ್ನು ಮಾಡಿದನು. ದಳಪತಿಶಹನು ಅರ್ಧ ಲಕ್ಷ ಸೈನ್ಯದೊಡನೆ ಸ್ವಯಂವರಕ್ಕೆ ಬರಬೇಕೆಂದು ಚಂದೇಲನು ಹೇಳಿ ಕಳುಹಿಸಿದನು. ಅಷ್ಟು ಸೈನ್ಯವನ್ನು ತನ್ನ ಚಿಕ್ಕ ಮಂಡಲದಲ್ಲಿ ಸಾಮಾನ್ಯ ರಾಜನಾದ ದಳಪತಿಶಹನು ಜತೆಗೊಳಿಸಲಾರನೆಂದು ಚಂದೇಲನು ಬಗೆದನು. ವೀರಭೂಮಿಯು ತುರುಕರ ಪಾಲಾದರೂ, ವೀರತ್ವವು ಈ ಭಾರತಭೂಮಿಯಿಂದ ಇನ್ನೂ ನಿರ್ನಾಮವಾಗಿರಲಿಲ್ಲ ಎಂದು ಚಂದೇಲನು ತಿಳಿದಿರಲಿಲ್ಲ. ಪ್ರಸಿದ್ಧ ವೀರನಿದ್ದರೆ ರಾಜಪುತ್ರರು ಉತ್ಸಾಹಿತರಾಗಿ ಅವನ ಪತಾಕೆಯ ಕೆಳಗೆ ಇನ್ನೂ ಒಟ್ಟು ಕೂಡುತ್ತಿದ್ದರೆಂದು ಚಂದೇಲನ ಮನಸ್ಸಿಗೆ ಹತ್ತಲಿಲ್ಲ. ಲಕ್ಷಾರ್ಧ ಸೈನ್ಯವನ್ನು ಮೋಹರಿಸಲಾರದೆ ದಳಪತಿಶಹನು ತಾನೆ ಹಿಂದೆಗೆವನೆಂದು ಚಂದೇಲನು ನಂಬಿದನು.

ಸ್ವಯಂವರದ ದಿನವು ಪ್ರಾಪ್ತವಾಯಿತು. ದುರ್ಗಾವತಿಯ ಸೌಂದರ್ಯಕೀರ್ತಿಯನ್ನು ಕೇಳಿ ಮೋಹಿತರಾದ ರಾಜಪುತ್ರರೆಲ್ಲರೂ ಮಂಟಪದಲ್ಲಿ ಬಂದು ನೆರೆದರು. ಆ ರಾಜಪುತ್ರರ ಮಂಡಲದಲ್ಲಿ ಗಢಾಮಂಡಲದ ನಾಯಕನು ಮಾತ್ರ ಇರಲಿಲ್ಲ. ಕನ್ನಿಕೆಯಾದ ದುರ್ಗಾವತಿಯು ಕೈಯಲ್ಲಿ ಪುಷ್ಪಮಾಲಿಕೆಯನ್ನು ಹಿಡಿದುಕೊಂಡು, ಸ್ವಯಂವರ ಮಂಟಪದಲ್ಲಿ ಮೆಲ್ಲನೆ ಕಾಲಿಟ್ಟಳು, ಮುಹೂರ್ತ ಮಾತ್ರ ನಿಂತುಕೊಂಡು, ತನ್ನ ಕಣ್ಣಿನ ಮಿಂಚಿನ್ನು ಸಭಾಮಂಡಲದಲ್ಲಿ ಬೀರಿದಳು. ಕೂಡಲೇ

ಅವನತಮಸ್ತಕಳಾಗಿ ಪ್ರತಿಮೆಯಂತೆ ನಿಂತುಬಿಟ್ಟಳು. ದಳಪತಿಶಹನ ಉಜ್ವಲಮುಖವು ಅಲ್ಲಿ ತೋರಲಿಲ್ಲ. ಆಶಿಸುವಂತಹನನ್ನು ಆಯ್ದುಕೊಳ್ಳು ಎಂದು ಮುದಿಹೃದಯನಾದ ತಂದೆಯು ಅಪ್ಪಣೆ ಕೊಟ್ಟನು. ದುರ್ಗಾವತಿಯು ನಿರುತ್ತರಳಾದಳು. ತಿಳಿಯದಂತೆ ಜಗುಳಿ ಬಿದ್ದ ಅಶ್ರುಜಲವು ಹೂಮಾಲೆಯಲ್ಲಿ ಹಿಮಬಿಂದುವಿನಂತೆ ನಿಮಿಷ ಮಾತ್ರವಿದ್ದು ತೊಲಗಿ, ಕರ್ಕಶವಾದ ಭೂಮಿಗೆ ಬಿದ್ದು ಆರಿಹೋಯಿತು. ಸ್ವಯಂವರದ ಮಂಗಲಮುಹೂರ್ತವು ತಪ್ಪಿಹೋಗುವುದೆಂದು ಚಂದೇಲನು ದುರ್ಗಾವತಿಯನ್ನು ತವಕಿಸಿದನು. ಅವಳ ಮುಕುಳಿತವಾದ ಮನಸಿನಲ್ಲಿ ಆ ಮಾತು ಇಳಿಯಲಿಲ್ಲ. ಅವಳು ಅಧೋವದನಳಾಗಿ ಕಣ್ಣೆತ್ತದೆ ಮುಂದೆ ಮುಂದೆ ಹೆಜ್ಜೆಯನ್ನಿಟ್ಟಳು. ಅವಳ ಹೃದಯಕಮಲವನ್ನು ವಿಕಸಿಸುವ ಬಾಲಸೂರ್ಯನು ಇನ್ನೂ ಪೂರ್ವಶಿಖರವನ್ನು ಹತ್ತಿರಲಿಲ್ಲ. ದಳಪತಿಶಹನು ಸೈನ್ಯವನ್ನು ಸೇರಿಸಿ, ದುರ್ಗದ ಹಿಂದುಗಡೆಯಲ್ಲಿ ನಿಲ್ಲಿಸಿ, ವಿವಾಹಮಂಟಪವನ್ನು ಅಲಂಕರಿಸುವುದಕ್ಕೆ ಕಾಲವಿಳಂಬವಾಯಿತು. ಕನ್ನೆಯ ಈ ಅವಸ್ಥೆಯನ್ನು ನೋಡಿ ಆಮಂತ್ರಿತ ರಾಜಪುತ್ರರೆಲ್ಲರೂ ಆಶ್ಚರ್ಯಗೊಂಡರು. ಕೈಕಟ್ಟಿದಂತಾದ ಕನ್ಯೆಯು ಏನು ಮಾಡಬೇಕೆಂಬುದು ಮುಂಗಾಣದೆ, ನೆಟ್ಟನೆ ಮಂಟಪದ ಬಹಿರ್ದ್ವಾರಕ್ಕೆ ಸರಿಯಾಗಿ ನಡೆದಳು. ಎರಡು ಕಡೆಗಳಲ್ಲಿ ಕುಳಿತುಕೊಂಡ ಅತಿಥಿಗಳೆಲ್ಲ ಕೊರಳುಗಳನ್ನು ನೀಡುತ್ತ ಹೊರಬಾಗಿಲಿನ ಕಡೆಗೆ ತಮ್ಮ ದೃಷ್ಟಿಯನ್ನು ಚಾಚಿದರು. ರಾಜಾಂಗಣದಲ್ಲಿ ಆನೆಯನ್ನು ಹತ್ತಿ ಒಬ್ಬ ಯೋಧನು ಬರುತ್ತಿದ್ದನು. ಅವರು ನೋಡುವಷ್ಟರಲ್ಲಿ ಯೋಧನು ಆನೆಯಿಂದ ಇಳಿದು ಮಂಟಪವನ್ನು ಪ್ರವೇಶಿಸಲಿಕ್ಕಿದ್ದನು. ದೂರದಿಂದೆ ಹಾರಿಬರುವ ಗಂಡು ಕಪೋತವನ್ನು ವಿರಹಿಣಿಯಾದ ಹೆಣ್ಣು ಕಪೋತವು ದೃಷ್ಟಿಸಿ, ಗರಿಗಳನ್ನು ಬಿಚ್ಚಿ, ಹಾರಿ ಹೋಗಿ ಆದರ ಬಳಿಸಂದು ಅದರ ರೆಕ್ಕೆಗಳಲ್ಲಿ ಒಗ್ಗೂಡುವಂತೆ, ತನ್ನ ಪ್ರಾಣವಲ್ಲಭನಾದ ದಳಪತಿಶಹನು ಸ್ವಯಂವರ ಮಂಟಪದಲ್ಲಿ ಪದಾರ್ಪಣ ಮಾಡುತ್ತಲೇ ಪುಳುಕಿತಳಾದ ದುರ್ಗಾವತಿಯು ಓಡಿಹೋಗಿ ಕುಸುಮಮಾಲೆಯನ್ನು ಅವನ ಕಂಠದಲ್ಲಿ ಇಟ್ಟು, ಅವನ ವಾಮಭಾಗವನ್ನು ಅವಲಂಬಿಸಿ ನಿಂತುಬಿಟ್ಟಳು. ಭಗ್ನಮನೋರಥನಾದ ಚಂದೇಲನು

ತನ್ನ ಮಗಳ ನಡತೆಯನ್ನು ನೋಡಿ ಅವಾಕ್ಕಾದನು. ಮನಪೂರ್ವಕವಾಗಿ ಮಗಳನ್ನು ಅಳಿಯನಿಗೆ ಕೊಡುವುದಕ್ಕೆ ಅವರು ಸಮ್ಮತಿಸಲಿಲ್ಲ. ದುರ್ಗಾವತಿಯನ್ನು ಅಳಿಯನ ಕೈಗೆ ಖಡ್ಗ ಧಾರಾಪೂರ್ವಕವಾಗಿ ಕೊಡಬೇಕೆಂದು ನಿಶ್ಚಯಿಸಿದನು. ಕೂಡಲೇ ಇತ್ತಂಡಗಳ ಸೇನೆಗಳು ಸನ್ನದ್ಧವಾಗಿ ಬಂದುವು; ಸ್ವಯಂವರಮಂಟಪವು ಸಮರಭೂಮಿಯಾಯಿತು; ಅಳಿಯನಿಗೂ ಮಾವನಿಗೂ ಕಾಳಗವಾಯಿತು. ಚಂದೇಲನು ಸೋತುಹೋದನು. ವಿಜಯಿಯಾದ ದಳಪತಿಶಹನು ರಮಣೀರತ್ನವನ್ನು ಹಾರಿಸಿಕೊಂಡು ಹೋದನು.

ಆದರೆ ದುರ್ಗಾವತಿಯ ಸಹವಾಸಸುಖವನ್ನು ಚಿರಕಾಲ ಅನುಭವಿಸುವುದನ್ನು ದಳಪತಿಶಹನ ಹಣೆಯಲ್ಲಿ ವಿಧಾತನು ಬರೆಯಲಿಲ್ಲ. ದುರ್ಗಾವತಿಯಲ್ಲಿ ಪುತ್ರೋತ್ಸವವಾದ ಸ್ವಲ್ಪಕಾಲದಲ್ಲಿಯೇ ದಳಪತಿಶಹನು ಕಾಲವಶನಾದನು. ಗಢಾಮಂಡಲದ ಮೇಲೆ ಸ್ವಲ್ಪಕಾಲದವರೆಗೆ ಅಂಧಕಾರವು ಆಚ್ಛಾದಿತವಾಯಿತು. ಗಢಾಮಂಡಲಕ್ಕೆ ಉಂಟಾದ ಈ ದುರ್ಗತಿಯನ್ನು ನೋಡಿ ಅಕ್ಬರು ಸಮಯವನ್ನು ಎದುರ್ನೋಡುತ್ತಿದ್ದನು. ಕೂಡಲೇ ದುರ್ಗಾವತಿಯು ತನಗೆ ಒದಗಿದ ಕಷ್ಟಸಂಕಷ್ಟವನ್ನು ಮರೆತು ಬಿಟ್ಟಳು; ಪತಿನಿಯೋಗದಿಂದ ಉಂಟಾದ ಕಣ್ಣೀರುಗಳನ್ನು ಕಣ್ಣುಗಳಿಂದ ಒರಸಿಬಿಟ್ಟಳು; ದುಃಖಸೂಚಕವಾದ ವಸನಗಳನ್ನು ತೆಗೆದಿಟ್ಟಳು. ಪ್ರಜಾಪರಿಪಾಲನದಲ್ಲಿಯೂ, ಸಂಸ್ಥಾನಾಭಿವೃದ್ಧಿಯಲ್ಲಿಯೂ, ಬಾಲಕನ ಅಭ್ಯುದಯದಲ್ಲಿಯೂ ತನ್ನ ಮನಸ್ಸನ್ನು ಊರಿದಳು. ಬಾಲಕನಾದ ವೀರನರೇಂದ್ರನು ಪ್ರಾಯಕ್ಕೆ ಬರುವ ವರೆಗೆ ಅಸಾಧಾರಣ ಸ್ತ್ರೀಯಾದ ದುರ್ಗಾವತಿಯು ರಾಜಕಾರ್ಯಸೂತ್ರಗಳನ್ನು ತನ್ನ ಕೈಯಲ್ಲೇ ಹಿಡಿದುಕೊಂಡಳು. ಅವಳ ಆಳಿಕೆಯಲ್ಲಿ ಮಾರ್ಗಗಳು ಸಂಸ್ಥಾನವನ್ನು ಸೀಳಿ ಹೋದುವು. ಅಲ್ಲಲ್ಲಿ ಪ್ರಯಾಣಸ್ಥರಿಗೆ ಅನುಕೂಲವಾದ ವಾಪಿಗಳೂ ಪ್ರಪಾಶಾಲೆಗಳೂ ತಲೆದೋರಿದುವು. ಕೆರೆ ಕಾಲುವೆಗಳು ವ್ಯವಸಾಯಕ್ಕೆ ಸಹಾಯಕವಾಗಿ ಹರಿದು ಹೋದುವು. ರಾಜ್ಯದ ಕಂದಾಯವು ಇಮ್ಮಡಿಯಾಯಿತು. ಗಢಾಮಂಡಲವು ಉನ್ನತಿಗೆ ಏರಿತು. ಪ್ರಜೆಗಳಿಗೆ ತಾಯಿಯಂತಿದ್ದ

ದುರ್ಗಾವತಿಯ ಆಳಿಕೆಯಲ್ಲಿ ಸುಖವಂಶರಾದ ಜನರೆಲ್ಲರು ತಮ್ಮ ಅಧಿಪತಿಯೆ ಅಕಾಲಿಕ ಮರಣದುಃಖವನ್ನು ಕ್ರಮೇಣ ಮರೆತು ಬಿಟ್ಟರು.

ಅವಿಚ್ಛಿನ್ನವಾದ ಸುಖವು ಐಹಿಕ ಮನುಷ್ಯನ ಪಾಲಿಗೆ ಬರುವುದಿಲ್ಲ. ದುರ್ಗಾವತಿಯ ರಾಜ್ಯರಕ್ಷಣ ಸುಖವನ್ನು ಅನುಭವಿಸುವ ಅದೃಷ್ಟವು ಪ್ರಜೆಗಳಿಗೆ ಇದ್ದಿಲ್ಲ. ಅವಳ ದೇಶೋನ್ನತಿಯ ಸಮಾಚಾರವನ್ನು ಕೇಳಿ ಅಸೂಯೆಗೊಂಡವರಲ್ಲಿ ಅನೇಕರು ಇದ್ದರು. ಇಂತಹವರಲ್ಲಿ ಅಸೋಫ್‌ಖಾನನು ಒಬ್ಬನು. ಅಸೋಫ್‌ಖಾನನು ಗಢಾಮಂಡಲದ ಬಳಿಯಲ್ಲಿರುವ ಮಾಳವ ದೇಶದ ಸುಭೇದಾರನಾಗಿದ್ದನು. ಸ್ತ್ರೀಪಾಲಿತವಾದ ಸಂಸ್ಥಾನವನ್ನು ಆಕ್ರಮಿಸುವುದಕ್ಕಾಗಿ ಇದೇ ಅವಕಾಶವೆಂದು ಅವನು ರಾಜಾಧಿರಾಜನಾದ ಅಕ್ಬರಿಗೆ ಬರೆದುಕಳುಹಿಸಿದು. ಅಕ್ಬರು ಪರರಾಜ್ಯ ಆಕಾಂಕ್ಷಿತನಾಗಿದ್ದರೂ ಶತ್ರುಗಳಲ್ಲಿ ಕೂಡ ಸದ್ಗುಣವನ್ನು ಪರಿಗ್ರಹಿಸಿ ಸನ್ಮಾನಿಸುತ್ತಿದ್ದನು. ಅಬಲೆಯಾದೆ ದುರ್ಗಾವತಿಯನ್ನೂ ಬಾಲಕನಾದ ವೀರನರೇಂದ್ರನನ್ನೂ ನೋಯಿಸುವುದು ಅಕ್ಬರಿನ ಆರ್ಯ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಆದರೆ ಗಢಾಮಂಡಲವು ರಕ್ತಪಾತವಿಲ್ಲದೆ ತನಗೆ ಶರಣು ಬರಬೇಕೆಂದು ತನ್ನ ಅಂತರ್ಯದಲ್ಲಿ ಆಶಿಸಿದ್ದನು. ಅಸೋಫಖಾನನು ಪುನಃ ಪುನಃ ಈ ವಿಷಯವನ್ನು ಅಕ್ಬರಿನ ಕಿವಿಗೆ ಒತ್ತಿ ಒತ್ತಿ, ಕೊನೆಗೆ ಗಢಾಮಂಡಲದ ಮೇಲೆ ದಳವನ್ನು ನಡೆಯಿಸಬಹುದೆಂದು ಅವನ ಅಪ್ಪಣೆಯನ್ನು ಹೊಂದಿದನು.

ಅಸೋಫ್‌ಖಾನನು ಅಸಂಖ್ಯಾತ ಸೇನೆಯೊಡನೆ ಪುರದ್ವಾರದಲ್ಲಿ ಬಂದಿಳಿದನು. ನಗರದಲ್ಲಿ ಕೋಲಾಹಲವು ಎದ್ದಿತು. ಅರಮನೆಯಲ್ಲಿ ಎಲ್ಲರೂ ದಿಗಿಲು ಬಿದ್ದರು. ಕೂಡಲೇ ದುರ್ಗಾವತಿಯು ಅರಮನೆಯನ್ನು ಬಿಟ್ಟು ಕೆಳಕ್ಕೆ ಬಂದಳು. ಸಂಸ್ಥಾನದ ಮುಖ್ಯಾಧಿಕಾರಿಗಳನ್ನು ಕರೆಯಿಸಿ ದುರ್ಗಾವತಿಯು ಹೀಗೆಂದಳು:- 'ನೀವು ಬುದ್ಧಿ ಸಂಪನ್ನರು; ರಣನೈಪುಣ್ಯಶೀಲರು. ನಾನು ಎಷ್ಟಾದರೂ ಹೆಂಗಸು; ಅರಮನೆಯನ್ನು ಬಿಟ್ಟವಳಲ್ಲ. ನಮ್ಮೆಲ್ಲರಿಗೆ ಬಂದೊದಗಿದ ಆಪತ್ತು ದುಸ್ಸಹವಾಗಿದೆ.

ನಿರಪರಾಧಿಗಳಾದ ನಮ್ಮನ್ನು ಕೊಂದು, ನಮ್ಮ ಸದ್ಧರ್ಮವನ್ನು ಹಾಳುಮಾಡಿ, ನಮ್ಮ ರಾಜ್ಯವನ್ನು ಅಕ್ರಮಿಸಬೇಕೆಂಬ ಈ ಮ್ಲೇಚ್ಛರ ನಡತೆಯು ನಿಮಗೆ ಯುಕ್ತ ತೋರುವುದೆ? ಇದಕ್ಕಿಂತಲೂ ದುಃಖಕರವಾದ ಸಂಗತಿಯುಂಟೆ? ಮನಸ್ವಿಯಾಗಿ ರಾಜಪುತ್ರರನ್ನು ಈ ಧರ್ಮಾಂಧರಾದ ಮುಸಲ್ಮಾನರು ಪೀಡಿಸುವುದೆಂದರೆ ನಮ್ಮಲ್ಲಿ ಸಹನಾಶಕ್ತಿಯಿಲ್ಲದೆ ಪೌರುಷವೇ ಇಲ್ಲದಂತಾಯಿತಲ್ಲಾ! ನನ್ನ ಪ್ರಜೆಗಳಿರ! ನನ್ನ ಬಂಧುಗಳಿರ! ನಾವು ಹೆಣ್ಣು ಕುರಿಗಳಂತೆ ಸುಮ್ಮನಿದ್ದರೆ ಪಲಾಯನಮಾಡುವ ಕತ್ತೆ ಕಿರುಬನು ಮೇಲೆ ಬೀಳಲು ಮುಂದೆ ಹೆಜ್ಜೆಯನ್ನಿಡುವುದು. ನಿಮ್ಮ ಈ ದೇಶವು ಶತ್ರುಗಳ ಪಾಲಾಗುವುದು. ನಿಮ್ಮ ಮಕ್ಕಳುಮರಿಗಳು ಅವರ ದಾಸರಾಗುವರು; ನಿಮ್ಮ ಹೆಂಡತಿಯರು ತಂಗಿಯರು. ಅವರ ಮನೆಯ ತೊತ್ತುಗಳಾಗುವರು. ಇದಕ್ಕಿಂತಲೂ ಹೀನವಾದ ಅಧೋಗತಿಯುಂಟೆ? ಯಾರು ನಮ್ಮ ಸನಾತನಧರ್ಮದ ವಿಗ್ರಹಗಳನ್ನು ಪದಹತಿಯಿಂದ ಚೂರ್ಣ ಮಾಡುವರೊ, ಯಾರು ನಮ್ಮ ಬೆನ್ನ ಮೇಲೆ ಕುಳಿತುಕೊಂಡು ನಿರಂಕುಶರಾಗಿ ಇಲ್ಲಿ ಆಳುವರೊ, ಯಾರು ನಮ್ಮ ಕಳತ್ರಪುತ್ರಿಯರ ಪಾತಿವ್ರತ್ಯವನ್ನು ಸೂರೆಗೊಳ್ಳುವರೊ ಆ ಮುಸಲ್ಮಾನರು, ಆ ಮಲಿನ ಮ್ಲೇಚ್ಛರು, ಆ ಮತಾಂಧ ತುರಷ್ಕರು ನಮ್ಮ ಪುರದ್ವಾರದ ಬಳಿಯಲ್ಲಿ ಇಳಿದಿರುವರಂತೆ. ಭಾರತ ಭೂಮಿಯಲ್ಲಿ ಇನ್ನೂ ವೀರತ್ವವು ಇದ್ದರೆ ಅದು ಈಗ ಚಿಗುರಲಿ! ಬಾಪ್ಪಾರಾಯನ ಪವಿತ್ರ ರಕ್ತವು ನಿಮ್ಮ ಧಮನಿಯಲ್ಲಿ ಹರಿಯುವುದು ನಿಜವಾದರೆ ಅದರ ದೃಷ್ಟಾಂಶವು ಈಗ ತೋರಲಿ! ನೀವು ವೀರಶಿರೋಮಣಿಗಳಾದ ರಾಜಪುತ್ರರ ಸಂತತಿಯವರಾಗಿದ್ದರೆ ಕತ್ತೆಕಿರುಬಗಳು ತಡೆಗಟ್ಟಿದ್ದ ಈ ಅನಾಥ ಗೋವನ್ನು ರಕ್ಷಿಸಿರಿ! ಗೋಹತ್ಯಕ್ಕೆ ಅವರು ಹೇಸುವವರಲ್ಲ. ಆದರೆ ಅವರು ನನ್ನ ಯಥಾರ್ಥ ಸ್ಥಿತಿಯನ್ನು ಕಂಡು ಹಿಡಿಯಲಿಲ್ಲ. ಈ ಗೋವೇ ಅವರಿಗೆ ವ್ಯಾಘ್ರಿಯಾಗಿ ಸರಿಣಮಿಸುವುದೆಂದು ತಿಳಿದುಕೊಳ್ಳಿರಿ! ದುರ್ಗಾ ನಮ್ಮೆಲ್ಲರಿಗೆ ಸಹಾಯಕಳಾಗು! ದುರ್ಗಾ! ನಮ್ಮ ಶತ್ರುಗಳನ್ನು ಹಾರಿಸಿಬಿಡುವುದಕ್ಕೆ ನಮ್ಮ ಹೃದಯದಲ್ಲಿ ಉತ್ಕಟಶಕ್ತಿಯನ್ನು ತುಂಬಿಸು!” ದುರ್ಗಾವತಿಯು ಈ ಉತ್ತೇಜಿತ ವಾಕ್ಕುಗಳನ್ನು ಕೇಳಿ ನಗರದ ರಾಜಪುತ್ರರೆಲ್ಲರು ರಕ್ತವರ್ಣ ವಸನವನ್ನು ಉಟ್ಟುಕೊಂಡು ಯುದ್ಧಕ್ಕೆ ಸಿದ್ಧರಾಗಿ

ಬಂದರು. ಎಂಟು ಸಾವಿರ ಸವಾರರೂ ಎಂಟು ಸಾವಿರ ಸೈನಿಕರೂ ಸ್ವದೇಶವನ್ನು ರಕ್ಷಿಸುವುದಕ್ಕೆ ಮುಂದಾದರು. ಈ ಸೈನ್ಯಕ್ಕೆ ದುರ್ಗಾವತಿ ತಾನೇ ಅಗ್ರೇಸರಳಾದಳು. ಲೋಹಕವಚವನ್ನು ತೊಟ್ಟುಕೊಂಡು ಶಸ್ತ್ರಧಾರಿಣಿಯಾಗಿ, ದುರ್ಗಾವತಿಯು ಕುದುರೆಯನ್ನು ಹತ್ತಿ, ಸೈನ್ಯವನ್ನು ನಡೆಯಿಸಿದಳು. ಯುದ್ಧವು ಪ್ರಾರಂಭವಾಯಿತು. ದುರ್ಗಾವತಿಯು ಪ್ರಾಣದ ಮೇಲೆ ಆಶೆಯನ್ನಿಡದೆ, ಶತ್ರುಸೈನ್ಯವನ್ನು ಭೇದಿಸಿಕೊಂಡು ಹೋದಳು. ಅವಳ ಭಲ್ಲೆಯ ಪೆಟ್ಟಿಗೆ ಶತ್ರುಗಳು ಚೂರ್ಣವಾಗಿ ಹೋದರು. ಹಿಂದಿರುಗುವಾಗ ದುರ್ಗಾವತಿಯು ಶತ್ರುವಿನ ವ್ಯೂಹದಲ್ಲಿ ಸಿಕ್ಕಿಬಿದ್ದಳು. ಅವಳ ಭುಜದಿಂದ ರಕ್ತಪ್ರವಾಹವು ಹರಿಯುತ್ತಿತ್ತು. ಅವಳನ್ನು ರಕ್ಷಿಸುವುದಕ್ಕೆ ರಾಜಪುತ್ರರು ತಂಡತಂಡವಾಗಿ ಹೋಗಿ ರಣರಂಗದಲ್ಲಿ ಮಲಗಿದರು. ಕೊನೆಗೆ ರಣಮತ್ತೆಯಾದ ಸಾಕ್ಷಾತ್ "ದುರ್ಗಾವತಿ"ಯನ್ನು ರಾಜಪುತ್ರರ ಪಾಳೆಯಕ್ಕೆ ಸುರಕ್ಷಿತವಾಗಿ ತಂದರು. ದೂರದಿಂದ ಇದನ್ನೆಲ್ಲಾ ನೋಡುತ್ತಿದ್ದ ಅಸೋಫ್‌ಖಾನನು ಆಶ್ಚರ್ಯದಿಂದ ಭ್ರಾಂತಿಗೊಂಡನು. ಈ ಬ್ರಾಂತಿಯೇ ಪಲಾಯನವಾಗಿ ಪರಿಣಮಿಸಿತು. ಹತಾಶನಾದ ಅಸೋಫ್‌ಖಾನನು ಅಳಿದುಳಿದ ಸೇನೆಯನ್ನು ಕೂಡಿಸಿ ಅಪಮಾನವನ್ನೂ ಜೀವವನ್ನೂ ಕಟ್ಟಿಕೊಂಡು, ಮಾಳವ ದೇಶಕ್ಕೆ ಜಾರಿಬಿಟ್ಟನು.

ನೀಚನಾದ ಅಸೋಫ್‌ಖಾನನು ಈ ಅಪಜಯದಿಂದಲೂ ಅಪಮಾನದಿಂದಲೂ ಇನ್ನೂ ಕೆರಳಿದಂತಾದನು. ಗಢಾಮಂಡಲವನ್ನು ಭೂಸಮಮಾಡಬೇಕೆಂದು ಅವನು 18 ತಿಂಗಳುಗಳ ಮೇಲೆ ಮಹಾ ಸೈನ್ಯವನ್ನು ಜೋಡಿಸಿಕೊಂಡು ಬಂದನು. ಆದರೂ ಗಢಾಮಂಡಲಕ್ಕೆ ರಕ್ಷಕರು ಇಲ್ಲದೆ ಇರಲಿಲ್ಲ. ಈ ಸಲವೂ ಅಸೋಫ್‌ಖಾನನು ಅಪಜಯವನ್ನು ತಾಳಲಾರದೆ ಓಡಿ ಹೋದನು. ಯುದ್ಧದ ಮುಖಾಂತರವಾಗಿ ತನ್ನ ಮನೋರಥವು ಸಿದ್ಧಿಸದೆ ಇದ್ದುದರಿಂದ, ಅಧಮಾಧಮನಾದ ಅಸೋಫ್‌ಖಾನನು ಕಪಟೋಪಾಯಗಳನ್ನು ಮಾಡುವುದಕ್ಕೆ ಕೈಚಾಚಿದನು. ದುರ್ಗಾವತಿಯ ರಾಜ್ಯಾಧಿಕಾರದಲ್ಲಿ ಪ್ರಮುಖರಾದ ಸರದಾರಲ್ಲಿ ಭೇದವುಂಟಾಗುವಂತೆಯೂ ಅವಳ ಆಪ್ತರು ಅವಳಿಂದ ಸಡಿಲಿಹೋಗುವಂತೆಯೂ

ಗೂಢಚಾರದಿಂದ ಒಳಸಂಚು ನಡೆಯಿಸಿದನು. ಈ ಕುಹಕದಿಂದ ರಾಜ್ಯದಲ್ಲಿ ಅನೇಕ ಅನಿಷ್ಟಗಳು ಮೊಳೆತುವು. ದುರ್ಗಾವತಿಯು ಈಗ ಯಥಾರ್ಥವಾಗಿ ಅಬಲೆಯಾದಳು. ಅದರೂ ತನ್ನ ದೇಹದಲ್ಲಿ ಪ್ರಾಣವಾಯುವು ಸಂಚರಿಸುವವರೆಗೆ ಮೊಗಲರು ತನ್ನ ರಾಜ್ಯದಲ್ಲಿ ಕಾಲಿಡದ ಹಾಗೆ ಮಾಡುವೆನೆಂದು ವೀರರಾಜ್ಞಿಯು ಶಪಥ ಕಟ್ಟಿದಳು. ಅಷ್ಟರಲ್ಲಿ ಅಸೋಫ್‌ಖಾನನು ಮೂರನೆಯ ಸಲ ದಂಡಿನೊಡನೆ ಬಂದನು. ದುರ್ಗಾವತಿ ಇದ್ದಷ್ಟು ಸೇನೆಯನ್ನು ಒತ್ತರಿಸಿಕೊಂಡು ಮುಂದರಿಸಿದಳು. ಈ ಕಾಲದಲ್ಲಿ ಅವಳ ಹದಿನಾಲ್ಕು ವರ್ಷ ವಯಸ್ಸಿನ ಬಾಲಕನು ಆಯುಧ ಪಾಣಿಯಾಗಿ ರಣಸನ್ನದ್ಧನಾದನು. ಯುದ್ಧವು ಘೋರವಾಗಿ ನಡೆಯಿತು. ವೀರೇಂದ್ರನು ಉನ್ಮತ್ತನಂತೆ ಶತ್ರುಗಳ ಮೇಲೆ ಬಿದ್ದು ಕಾಳಗಮಾಡಿದನು. ಕೊನೆಗೆ ಗಾಯಗೊಂಡು ಖಡ್ಗಹಸ್ತನಾಗಿ ರಣರಂಗದಲ್ಲಿ ಮಲಗಿದನು; ಮಲಗಿದವನು ಮತ್ತೇಳಲಿಲ್ಲ. ಮರಿಯನ್ನು ಕಳೆದ ವ್ಯಾಘ್ರಿಯಂತೆ ದುರ್ಗಾವತಿ ಅವೇಶಗೊಂಡು ಶತ್ರುಗಳ ಮೇಲೆ ಬೀಳಲು ಹೊರಟಳು. “ಮರಣಕರವಾದ ಏಟನ್ನು ಹೊಂದಿದ ಬಾಲಕನನ್ನು ಕರೆದುಕೊಂಡು ಸ್ವಾಮಿನಿ ಶಿಬಿರಕ್ಕೆ ತೆರಳಬಾರದೆ? ನಮ್ಮಂತಹ ವೀರರಿರಲು ಯುದ್ಧದ ಗೊಡವೆ ತಮಗೇಕೆ?” ಎಂದು ರಣರಂಗದಲ್ಲಿ ಸ್ವಾಮಿಭಕ್ತನಾದ ರಾಜಪುತ್ರನೊಬ್ಬನು ಕೇಳಿದನು. ಅದಕ್ಕೆ ದುರ್ಗಾವತಿಯು ಗಂಭೀರಸ್ವರದಿಂದ “ನಾನು ಹಿಂತಿರುಗುವೆನೆಂಬ ಸುದ್ದಿ ತಿಳಿದರೆ, ಸೈನ್ಯವೆಲ್ಲವೂ ಹಿಮ್ಮೆಟ್ಟುವುದು. ವೀರಕುಮಾರನು ರಣರಂಗದಲ್ಲಿ ಮಡಿದು ಕ್ಷತ್ರಿಯ ಸ್ವರ್ಗವನ್ನು ಏರಿದನೆಂದರೆ ನನಗೆ ಸಂತೋಷವಲ್ಲನೇ? ಯುದ್ಧ ತೀರಿದೊಡನೆಯೇ ನನ್ನ ಪ್ರಿಯ ಪುತ್ರನನ್ನು ಪರಲೋಕದಲ್ಲಿ ನಾನು ಸೇರಬೇಕೆಂದಿರುವೆನು” ಎಂದು ಹೇಳಿದಳು. ದುರ್ಗಾವತಿ! ನೀನು ಧನ್ಯೆ! ನೀನು ಯುದ್ಧದಲ್ಲಿ ಸೋತರೂ ಇನ್ನು ಗೆದ್ದೆ! ಶತ್ರುಗಳ ಪರಂಪರೆಯ ಸಾಲುಗಳಿಂದ ದುರ್ಗಾವತಿಯ ಸೇನೆ ಪುಡಿಪುಡಿಯಾಯಿತು. ಒಂದು ಬಾಣವು ಅವಳ ಕಣ್ಣನ್ನು ಚುಚ್ಚಿತು; ಮತ್ತೊಂದು ಬಾಣವು ಅವಳ ಎದೆಯನ್ನು ನಾಟಿತು. ಬಾಣಗಳನ್ನು ಕಿತ್ತು ತೆಗೆದರೂ ಅವಳು ರಕ್ತಸ್ರಾವದಿಂದ ಮೂರ್ಛೆ ಹೋಗಿ, ವಾಹನದ ಮೇಲೆ ಒರಗಿದಳು. ಅವಳು ಕುಳಿತಿದ್ದ ಆನೆಯನ್ನು ಯೋಧನೊಬ್ಬನು

ಶಿಬಿರಕ್ಕೆ ಹಿಂತಿರುಗಿಸಲಿಕ್ಕೆ ಪ್ರಯತ್ನಿಸಿದನು. ಕೂಡಲೇ ಧೀರ ಯುವತಿಯು ಮೂರ್ಛೆ ತಿಳಿದು ಎದ್ದು ಮುಗುಳ್ನಗು ನಗಾಡಿದಳು. "ನನ್ನನ್ನು ಬದುಕಿಸಲು ಎಣಿಸುವೆಯಾ? ನನ್ನನ್ನು ಶಿಬಿರಕ್ಕೆ ಒಯ್ದರೆ ನನಗೆ ಮುಂದಿನ ಮರಣವನ್ನು ತಪ್ಪಿಸಬಹುದೇ? ಅದರ ಬದಲಾಗಿ ಕೈಯಲ್ಲಿದ್ದ ಶಸ್ತ್ರದಿಂದ ನನ್ನ ಪ್ರಾಣವನ್ನು ದೇಹದಿಂದ ಉಗಿದು ಬಿಡು ಎಂದು ಅಸ್ಪುಟಸ್ವರದಿಂದ ಹೇಳಿದಳು. ಇಂತಹ ಜನನಿಯನ್ನು ಕೊಲ್ಲಲು ಯಾರು ತಾನೆ ಕೈಮಾಡುವರು? ಸುತ್ತಲಿರುವವರೆಲ್ಲರೂ ಮರುಗಿದರು. ಕೂಡಲೇ ದುರ್ಗಾವತಿಯು ನಗಾಡುತ್ತ ತನ್ನ ಖಡ್ಗಕ್ಕೆ ತನ್ನ ಉದರವನ್ನು ಒರೆಯಾಗಿ ಮಾಡಿಬಿಟ್ಟಳು.

ಯುದ್ಧವು ಸಮಾಪ್ತವಾಯಿತು. ಯುದ್ಧದ ನಾಯಕಿಯೇ ರಣತಲದಲ್ಲಿ ಒರಗಿದ ಬಳಿಕ ಯುದ್ಧವನ್ನು ನಡೆಯಿಸುವವರು ಯಾರು? ರಾಜ್ಯವು ಅಸೋಫ್‌ಖಾನನ ವಶವಾಯಿತು. ಆದರೆ ಕ್ಷಾತ್ರಧರ್ಮಪರಾಯಣೆಯಾದ ಆ ವೀರಶಿರೋಮಣಿಯ ಪವಿತ್ರದೇಹವು ಶತ್ರುಗಳ ಅಪವಿತ್ರ ಹಸ್ತದಿಂದ ಮಲಿನವಾಗಲಿಲ್ಲ. ಅನುಚರರಲ್ಲಿ ಕೆಲವರು ಕೂಡಲೇ ಅಗ್ನಿಕುಂಡವನ್ನು ಬೆಳಗಿಸಿ, ಶಾಸ್ತ್ರೋಕ್ತವಿಧಿಯಿಂದ ದುರ್ಗಾವತಿಯ ಸಂಸ್ಕಾರಗಳನ್ನು ನಡೆಯಿಸಿದರು.

ದುರ್ಗಾವತಿಯು ಈ ನಶ್ವರ ಶರೀರವನ್ನು ಬಿಟ್ಟು ಅವಿನಶ್ವರ ಕೀರ್ತಿಯನ್ನು ಪಡೆದಳು. ಈ ವೀರಯುವತಿಯನ್ನು ಕುರಿತು ಕರ್ನೆಲ್ ಸ್ಲೀಮೆನ್ ಸಾಹೇಬರು ಹೀಗೆ ಬರೆದಿರುವರು:—"ರಣಶೂರ ರಾಣಿಯಾದ ದುರ್ಗಾವತಿಯ ಸ್ಮಾರಕವು ಅದೇ ಪರ್ವತಪ್ರದೇಶಮಧ್ಯದಲ್ಲಿ ಕಟ್ಟಲ್ಪಟ್ಟಿದೆ. ಅಲ್ಲಿ ಎರಡು ಪಾಷಾಣಸ್ತಂಭಗಳು ನೆಟ್ಟಗೆ ನಿಲ್ಲಿಸಿದ್ದು ಅವುಗಳು ಆ ಯುದ್ಧಭೂಮಿಯ ಪ್ರೇಕ್ಷಕರ ಮನಸ್ಸಿನಲ್ಲಿ ಮೂರ್ತಿನಂತವಾದ ದೃಶ್ಯವನ್ನು ಉತ್ಪನ್ನಮಾಡುವುವು. ಈ ಗಿರಿಶಿಖರದಲ್ಲಿ ರಾತ್ರಿ ಸಮಯದಲ್ಲಿ ಅತಿ ಭಯಂಕರವಾದ ರಣಘೋಷವು ಆಗುತ್ತದೆಂದು ಹೇಳುವರು. ಈ ನಿರ್ಜನವಾದ ಮತ್ತು ರಮಣೀಯವಾದ ಪ್ರದೇಶ ಮಧ್ಯದಲ್ಲಿ ಹೋಗುವ ಪ್ರವಾಸಿಜನರು ಅತ್ಯಾನಂದದಿಂದ ಈ ಸ್ಥಳದಲ್ಲಿ ನಡೆಯುವರು. ಈ ರಾಣಿಯ ಸಮಾಧಿಯ

ದರ್ಶನವನ್ನು ಪ್ರೇಮುಪೂರ್ವಕವಾಗಿ ಸ್ವೀಕರಿಸುವರು; ಅವಳ ಪರಾಕ್ರಮ ಗುಣಗಳಿಂದ ಬೆರಗಾಗಿ ಸ್ವಾನಂದಚಿತ್ತದಿಂದ ಅವಳನ್ನು ಪೂಜಿಸುವರು. ಈ ಪ್ರದೇಶಮಧ್ಯದಲ್ಲಿ ಹೊಳೆಹೊಳೆವ ಕಂಚಿನ ತುಂಡುಗಳು ಹೇರಳವಾಗಿ ಸಿಕ್ಕುತ್ತವೆ. ಅವನ್ನು ತೆಗೆದುಕೊಂಡು ಆ ಜನರು ಅಲ್ಲಿ ಸಮರ್ಪಿಸುವರು. ತಮ್ಮ ಪ್ರಜಾಭಕ್ತಿಗನುಸಾರವಾಗಿ ನಾನು ಅದನ್ನು ನೋಡುತ್ತಲೇ ಮಹಾರಾಣಿ ದುರ್ಗಾವತಿಯ ದಿವ್ಯಗುಣದ ಅಭಿನಂದನಾರ್ಥವಾಗಿ ಒಂದು ತುಂಡನ್ನು ಅರ್ಪಣಮಾಡಿದೆನು.” ಅಲೌಕಿಕ ಸೌಂದರ್ಯವನ್ನು ಯಾರು ತಾನೇ ಪೂಜಿಸದೇ ಇರುವರು?

## ವೀರಮತಿ

ಮಧ್ಯಾಹ್ನ ಸೂರ್ಯನು ಆಕಾಶವಕ್ಷವನ್ನು ಏರಿದ್ದನು. ಅವನ ಉಷ್ಣವಾದ ಕಿರಣಗಳು ದೇವಗಿರಿಯ ರಾಜಮಾರ್ಗಗಳನ್ನು ತಪ್ತಮಾಡುತ್ತಲಿದ್ದುವು. ಅತ್ತಿತ್ತ ಮೇಯುತ್ತಿದ್ದ ಗೋವುಗಳು ವೃಕ್ಷಛಾಯೆಯನ್ನು ಆಶ್ರಯಿಸಿ, ನಿಶ್ರಾಂತಿಯಿಂದ ಮೆಲ್ಕಾಡುತ್ತಿದ್ದವು; ಆಗಾಗ ಬಾಲಗಳನ್ನು ಬೀಸುತ್ತ ಬೆನ್ನ ಮೇಲಿನ ನೊಳಗಳನ್ನು ಝಾಡಿಸುತ್ತಿದ್ದುವು. ಹಕ್ಕಿಗಳು ಮರದ ಎಲೆಗಳಲ್ಲಿ ಹುದುಗಿಕೊಂಡು, ಸುಖವಾಗಿ ನಿದ್ದೆ ಹೋಗುತ್ತಿದ್ದುವು. ಕಾಗೆಯು ಅತ್ತಿತ್ತ ಅರಚುತ್ತ ಮರದಿಂದ ಮರಕ್ಕೆ ಹಾರುತ್ತಲಿತ್ತು. ಗಿಡುಗನು ಗಗನಮಧ್ಯದಲ್ಲಿ ಮಂಡಳಿಸಿ, ನೆಲದ ಮೇಲೆ ಸುಳಿಯುವ ಕೊಳ್ಳೆಯನ್ನು. ತೀಕ್ಷ್ಣದೃಷ್ಟಿಯಿಂದ ನೋಡಿ, ಫಕ್ಕನೆ ಕೆಳಕ್ಕೆ ಹಾರಿಬಂದು, ಹತಾಶನಾಗಿ ಸಮೀಪದಲ್ಲಿದ ಉನ್ನತವಾದ ಮಂದಿರದ ಸೂರುಗಳಲ್ಲಿ ಕುಳಿತುಕೊಳ್ಳುತಿತ್ತು. ದೇವಗಿರಿಯ ಅರಮನೆಯ ಬಳಿಯಲ್ಲಿ ಕಾವಲುಗಾರರು ಬಹಳ ಎಚ್ಚರಿಕೆಯಿಂದ ಪಹರೇ ಮಾಡುತ್ತಿದ್ದರು. ಅರಮನೆಯಲ್ಲಿ ಜನರು ಕಾರ್ಯಗೌರವದಿಂದ ಹೋಗುತ್ತ ಬರುತ್ತ, ಅಲ್ಲಲ್ಲಿ ಗುಂಪು ಕೂಡಿ ನಿಂತು, ತಮ್ಮೊಳಗೆನೇ ಏನನ್ನೋ ವಿಚಾರ ಮಾಡುತ್ತಿದ್ದರು. ರಾಜಮಂದಿರದ ಕಿರುಬಾಗಿಲನಿಂದ ಒಂದು ಪಲ್ಲಕಿಯು ಹೊರಕ್ಕೆ ಬಂದಿತು. ಪ್ರಜೆಗಳೆಲ್ಲರು ವಿಶೇಷವಾದ ಕಾರ್ಯದಲ್ಲಿ ಮಗ್ನ ರಾದುದರಿಂದ, ಪಲ್ಲಕ್ಕಿಯನ್ನು ಯಾರೂ ಲಕ್ಷಿಸಲಿಲ್ಲ. ಅಂದಣವು ತಪ್ತವಾದ ರಾಜವಾರ್ಗವನ್ನು ಬಿಟ್ಟು, ನಿರ್ಜನವಾದ ಶೀತಲವಾದ ರಹಸ್ಯಮಾರ್ಗವನ್ನು ಹಿಡಿದುಕೊಂಡು ಹೋಯಿತು. ಪಲ್ಲಕ್ಕಿಯು ಕೋಟೆಯನ್ನು ಸಮೀಪಿಸುತ್ತಲೇ ಪಹರೆಯವನು ಅದನ್ನು ನೋಡಿ, ಖಡ್ಗವನ್ನು ಎತ್ತಿಹಿಡಿದು, ಅದನ್ನು ಅಡ್ಡಿಮಾಡದೆ ಹೊರಕ್ಕೆ ಬಿಟ್ಟನು. ಅಂದಣವು ದೇವಗಿರಿಯ ಕೋಟೆಯನ್ನು ಅತಿಕ್ರಮಿಸಿ, ಅದರ ಬಹಿರ್ಭಾಗದಲ್ಲಿದ್ದ ಅರಣ್ಯವನ್ನು ಸೇರಿತು. ಕೊನೆಗೆ ವಿಜನವಾದ ಭೀಕರವಾದ ಅರಣ್ಯಮಧ್ಯದಲ್ಲಿದ್ದ ಕಾಳಿಕಾ ದೇವಸ್ಥಾನದ ಬಳಿಯಲ್ಲಿ

ಆಳುಗಳು ಪಲ್ಲಕ್ಕಿಯನ್ನು ಇಟ್ಟುಹೋದರು. ಕೂಡಲೇ ರಮಣಿಯರಿಬ್ಬರು ಅಂದಣದಿಂದ ಕೆಳಕ್ಕೆ ಇಳಿದು, ಕಾಲ್ನಡೆಯಾಗಿ ದೇವಸ್ಥಾನವನ್ನು ಪ್ರವೇಶಿಸುವುದಕ್ಕೆ ಸಿದ್ಧರಾಗಿ, ತಮ್ಮ ವಸ್ತ್ರಾಲಂಕಾರಗಳನ್ನು ಸರಿಗೊಳಿಸುವುದಕ್ಕೆ, ಒಂದು ಮುಹೂರ್ತ ಅಲ್ಲಿಯೇ ತಡೆದರು.

ಇಬ್ಬರೂ ಸಮವಯಸ್ಕೆಯರು. ಇಬ್ಬರೂ ಅಸಮಾನ ಸೌಂದರ್ಯ ಶಾಲಿನಿಯರಾಗಿದ್ದರೂ, ಒಬ್ಬಳ ರೂಪಲಾವಣ್ಯಗಳು ಮತ್ತೊಬ್ಬಳ ಅಂದ ಚೆಂದವನ್ನು ಅತಿಕ್ರಮಿಸಿದ್ದುವು. ಭಾರತೀಯ ಕವಿಗಳು ಸ್ತ್ರೀಯನ್ನು 'ಚಂದ್ರಮುಖಿ' 'ಕಮಲವದನೆ' ಎಂದು ವರ್ಣಿಸಿರುವರು. ಈ ಯುವತಿಯು ಈ ಅಭಿದಾನಕ್ಕೆ ಪಾತ್ರಳಾಗಿರಲಿಲ್ಲ. ಏಕೆಂದರೆ ಇವಳ ಮುಖಮಂಡಲವು ನೈಸರ್ಗಿಕ ಚಂದ್ರನಂತಾಗಲೀ ಕಮಲದಂತಾಗಲೀ ಶೋಭಿಸಿರಲಿಲ್ಲ. ವರ್ತುಲವಾದ ಪೂರ್ಣಚಂದ್ರನು ಸ್ವಲ್ಪ ದೀರ್ಘಾಕಾರವನ್ನು ಧರಿಸಿದರೆ ಎಷ್ಟು ಮಧುರನಾಗಿ ಶೋಭಿಸಬಹುದೋ, ಅಥವಾ ದೀರ್ಘವಾದ ಕಮಲಪತ್ರವು ಸ್ವಲ್ಪ ವೃತ್ತಾಕೃತಿಯನ್ನು ವಹಿಸಿದರೆ ಎಷ್ಟು ರಮ್ಯವಾಗಿ ಉಜ್ವಲಿಸುವುದೋ ಅಷ್ಟೇ ಸೌಂದರ್ಯಮಯವಾಗಿ ಆ ರಮಣಿಯ ಮುಖಮಂಡಲವು ರಂಜಿಸುತ್ತಿತ್ತು. ನಯನೇಂದ್ರಿಯಗಳು ಹರಿಣಲೋಚನದಂತೆ ಕಂಪಿಸುತ್ತಲಿದ್ದುವು. ಈ ಕಂಪನವು ಅವುಗಳಲ್ಲಿ ಪ್ರವಹಿಸುತ್ತಲಿದ್ದ ಪ್ರೇಮರಸದಿಂದ ಸರಿಯಾಗಿ ವ್ಯಕ್ತವಾಗುತ್ತಿರಲಿಲ್ಲ. ಅದೂ ಅಲ್ಲದೆ ಮುಖದ ಮೇಲೆ ಕ್ಷಾತ್ರತೇಜಸ್ಸು ಸಂಪೂರ್ಣವಾಗಿ ಪ್ರತಿಫಲಿಸುತ್ತಿದ್ದುದರಿಂದ, ಭಯದಿಂದ ಉಂಟಾದ ಕಂಪನವು ಎಲ್ಲಿಯೋ ಅದೃಶ್ಯವಾಗಿತ್ತು. ಸೂರ್ಯನ ಉಷ್ಣದಿಂದಲೊ ಅಥವಾ ಮಾರ್ಗದ ಆಯಾಸದಿಂದಲೊ ಪ್ರಾಪ್ತವಾದ ಸ್ವೇದಬಿಂದುಗಳನ್ನು ಧರಿಸಿದ ಆ ಮುಖವು ಹಿಮಜಲದಿಂದ ಮ್ಲಾನವಾದ ಹೇಮಂತಋತುವಿನ ಕಮಲದಂತೆ ಕನಿಕರವನ್ನು ಉಂಟುಮಾಡುತ್ತಲಿತ್ತು. ಮಸ್ತಕದ ಹಿಂದು ಗಡೆಯಲ್ಲಿದ್ದ ವೇಣಿಯು ಶಿರವನ್ನು ಏರಿದ ಚೀನಾಂಬರದಿಂದ ಅಚ್ಛಾದಿತವಾಗಿದ್ದುದರಿಂದ, ಅವಳ ಪೃಷ್ಟದಲ್ಲಿಯೇ ಸ್ವತಂತ್ರವಾಗಿ ಕ್ರೀಡಿಸುತ್ತಲಿತ್ತು. ಹಸುರು ರೇಶ್ಮೆಯ ಸೆರಗನ್ನು ದಕ್ಷಿಣ ಬಾಹುವಿನ ಕೆಳಗಡೆಯಿಂದ

ಸೆಳೆದುಕೊಂಡು, ಉಡಿಯಲ್ಲಿ ಬಿಗಿದುದರಿಂದ ವಕ್ಷೋರಂಗವು ಇನ್ನೂ ಉನ್ನತವಾಗಿಯೂ ಉಜ್ವಲವಾಗಿಯೂ ತೋರುತ್ತಲಿತ್ತು. ಮನ್ಮಥವೈಜಯಂತಿಯಂತೆ ವಾಯುವಿನಲ್ಲಿ ಮೆಲ್ಲಮೆಲ್ಲನೆ ತೇಲುತ್ತಿರುವ ಹಸುರಾದ ದುಕೂಲವು ಅವಳ ಅಂಗಕಾಂತಿಯನ್ನು ಸಂಪೂರ್ಣವಾಗಿ ಮುಚ್ಚಿದರೂ, ಅಂಗ ಛಾಯೆಯು ವಸ್ತ್ರದ ಹಿಂದುಗಡೆಯಿಂದ ನೋಟಕರ ಮನಸ್ಸನ್ನು ಅಕರ್ಷಿಸುವಂತಿತ್ತು. ದೇಹವರ್ಣವು ಹರಿದ್ರ; ಸ್ವಲ್ಪ ಹಳದಿ; ಸುವರ್ಣಕಮಲದಂತೆ ಹರಿದ್ರವಾಗಿರಲಿಲ್ಲ; ಹೊಂಗೇದಗೆಯಂತೆ ಹಳದಿಯಾಗಿರಲಿಲ್ಲ. ಹಿಮದಿಂದ ಆರ್ದ್ರವಾದ ಸುವರ್ಣಕಮಲವು ಹರಿತಪತ್ರದ ಛಾಯೆಯಿಂದ ಯಾವ ಕಾಂತಿಯನ್ನು ಧರಿಸುವುದೋ, ಚಂದ್ರಕಾಂತಿಯಿಂದ ನನೆದ ಹೊಂಗೇದಗೆಯು ಹಸುರೆಲೆಯ ಮರೆಯಲ್ಲಿ ಯಾವ ಬಣ್ಣದಿಂದ ಶೋಭಿಸುವುದೋ, ಆ ಕಾಂತಿಯೂ ಆ ವರ್ಣವೂ ಈ ಯುವತಿಯ ಪ್ರಫುಲ್ಲಿತ ದೇಹದಲ್ಲಿ ಸಮ್ಮಿಳಿತವಾಗಿದ್ದುವು.

ರಮಣಿಯರಿಬ್ಬರು ದೇವಸ್ಥಾನವನ್ನು ಪ್ರವೇಶಿಸಿದರು, ಕಾಳಿಕಾಮೂರ್ತಿಯ ಸಮ್ಮುಖದಲ್ಲಿ ಬದ್ಧಹಸ್ತದಿಂದ ಇಬ್ಬರೂ ಕಣ್ಮುಚ್ಚಿ ನಿಮಿಷ ಮಾತ್ರ ನಿಂತರು. ಬಳಿಕ ಕರಾಳವಾದ ಚಂಡಿಕಾ ವಿಗ್ರಹವನ್ನು ಬಲವಂದು ದೇವಿಯ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿವರು. ಪುನಃ ಎದ್ದು ನಿಂತು “ತಾಯೇ! ಚಂಡಿಕೇ! ನಮಗೆ ಬಂದಿದ್ದ ಆಪತ್ತನ್ನು ಪರಿಹರಿಸು! ಯುದ್ಧದಲ್ಲಿ ನಮ್ಮ ಪತಿಗಳಿಗೆ ಸಹಾಯಕಳಾಗು! ಅವರ ಹಸ್ತದಿಂದಲೇ ನಮ್ಮ ವೈರಿಗಳನ್ನು ಸಂಹರಿಸು!” ಎಂದು ಪ್ರಾರ್ಥಿಸಿದರು. ಪುನಃ ದೇವಗಿರಿ ದುರ್ಗದ ಅಧಿಷ್ಠಾತ್ರಿಯಾದ ದುರ್ಗಾಂಬಿಕೆಯನ್ನು ಪ್ರದಕ್ಷಿಣೆ ಮಾಡಿ, ಇಬ್ಬರೂ ಪಲ್ಲಕ್ಕಿಯನ್ನು ಹತ್ತುವಷ್ಟರಲ್ಲಿ ಕುದುರೆಯ ಖುರಪುಟ ಧ್ವನಿಯು ಕೇಳಿಸಿದುದರಿಂದ, ಇಬ್ಬರೂ ಸ್ವಲ್ಪ ಸಂಭ್ರಾಂತರಾದಂತೆ ಅಲ್ಲಿಯೇ ತಡೆದರು. ಕೂಡಲೇ ಒಬ್ಬ ಅಶ್ವಾರೋಹಿಯು ಕುದುರೆಯಿಂದ ದುಮಿಕಿ, ಯುವತಿಯರ ಸಮೀಪಕ್ಕೆ ಬರುತ್ತಿದ್ದನು. ಯುವತಿಯರು ಇವನನ್ನು ದೃಷ್ಟಿಸುತ್ತಲೇ ಆನಂದದಿಂದಲೂ ಆಶ್ಚರ್ಯದಿಂದಲೂ ಚಕಿತರಾಗಿಹೋದರು.

**ಯುವಕ**—"ವೀರಮತಿ! ನೀನು ಗೌರಿಯೊಡನೆ ಇಲ್ಲಿ ಏಕೆ ಬಂದಿ?"

ವೀರಮತಿಯು ಯುವಕನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು, "ನಾವು ಇಲ್ಲಿ ಬಂದೆವೆಂದು ನಿನಗೆ ಹೇಗೆ ತಾನೇ ತಿಳಿಯಿತು?" ಎಂದು ಪ್ರಶ್ನಿಸಿದಳು.

**ಯುವಕ**—"ರಾಜಮಂದಿರದಲ್ಲಿ ನೀವು ಇಲ್ಲದೆ ಇದ್ದುದನ್ನು ನೋಡಿ, ನಾನು ಕಾತರದಿಂದ ನಿಮ್ಮನ್ನು ಹುಡುಕಿ ಬಂದೆನು. ಕೋಟೆಯ ಪಹರೇಯವರು ನೀವು ಕಾಳಿಕಾ ಪೂಜೆಗೆ ಹೋಗಿರುವಿರಿ ಎಂದು ಹೇಳಿದನು. ನೀವು ಇಲ್ಲಿ ಏಕೆ ಬಂದಿರಿ?"

**ವೀರಮತಿ**—"ಏಕೆಂದು ಇನ್ನೂ ತಿಳಿಯಲಿಲ್ಲವೇ? ಮುಂದಿನ ಆಪತ್ತನ್ನು ಪರಿಹರಿಸುವಂತೆ ದೇವಿಯನ್ನು ಬೇಡುವುದಕ್ಕೆ—

**ಯುವಕ**—"ಅದಕ್ಕೋಸ್ಕರ ನೀವು ಇಷ್ಟು ದೂರ ಬರಬೇಕಿತ್ತೇ? ಶತ್ರುವಿನ ಪಾಳಯದವರು ನಿಮ್ಮನ್ನು ಇಲ್ಲಿ ಎಲ್ಲಾದರೂ ನೋಡಿದರೆ ನಿಮ್ಮ ಗತಿ ಏನಾಗುವುದು?"

ಈ ಮಾತನ್ನು ಕೇಳುತ್ತಲೇ ವೀರಮತಿಯ ಮುಖದಲ್ಲಿ ಒಂದು ಪ್ರಕಾರವಾದ ತೇಜಸ್ಸು ಹೊಳೆಯಿತು. ಕೂಡಲೇ ತನ್ನ ಕಟಿಭಾಗದಲ್ಲಿ ಅಡಗಿಸಿಟ್ಟ ಭರ್ಚಿಯನ್ನು ಇಚೆಗೆ ಸೆಳೆದುಕೊಂಡು, ನೋಡಿದೆಯೇ ಇದನ್ನು? ಇದರ ಸಹಾಯದಿಂದಲೇ ನಾನು ದಾರಿಯನ್ನು ಬಿಡಿಸಿಕೊಂಡು, ಅರಮನೆಗೆ ಹಿಂದೆರಳುತ್ತಿದ್ದೆನು" ಎಂದು ವೀರಮತಿಯು ಉತ್ತರ ಕೊಟ್ಟಳು.

**ಯುವಕ**—"ನೀನು ಕ್ಷತ್ರಿಯ ಕುಮಾರಿ ಎಂದು ಬಲ್ಲೆ. ನೀವೆಲ್ಲರು ನಮ್ಮ ಭುಜಗಳ ನೆರಳಿನಲ್ಲಿರುವಾಗ ಇಷ್ಟು ಆಯಾಸವೇಕೆ?"

**ವೀರಮತಿ**—"ಯುದ್ಧ ಕಾಲದಲ್ಲಿ ಶೌರ್ಯವನ್ನು ತೋರಿಸುವುದು ಪುರುಷಕರ್ತವ್ಯ. ದೇವಪ್ರಾರ್ಥನೆಯನ್ನು ಮಾಡುವುದು ಸ್ತ್ರೀಕೃತ್ಯ. ಇಬ್ಬರ ಕಾರ್ಯಗಳೂ ಒಂದೇ ಫಲನನ್ನು ಕೊಡುವುವು."

ಯುವಕನು ಮತ್ತೆ ಮಾತನಾಡಲಿಲ್ಲ. ಗೌರಿಯು ಈ ಸಂಭಾಷಣೆಯ ಕಾಲದಲ್ಲಿ ಸುಮ್ಮನಿದ್ದು ಕೊನೆಗೆ "ಸಖಿಯೆ! ವೀರಮತಿ! ನಾವು ಇನ್ನೂ ಇಲ್ಲಿ ತಳುವಿದರೆ, ತಂದೆಯು ನಮ್ಮ ಮೇಲೆ ಕೋಪಿಸದೆ ಇರಲಾರನು" ಎಂದಳು.

ಇಬ್ಬರೂ ಪಲ್ಲಕ್ಕಿಯನ್ನು ಹತ್ತಿ, ಯುವಕನನ್ನು ಕರೆದರು. ಯುವಕನು "ನಾನು ಇದೇ ಸಂದರ್ಭದಲ್ಲಿ ಶತ್ರುವಿನ ಸೇನೆಯ ವಿಸ್ತಾರವನ್ನೂ ರಚನೆಯನ್ನೂ ಹೊಂಚಿ ನೋಡಿ ಬರುವೆನು. ನೀವು ಬೇಗನೆ ಮುಂದು ಹೋಗಿರಿ" ಎಂದು ಹೇಳಿ ಕೋಟೆಯವರೆಗೆ ಅವರಿಬ್ಬರ ಮೈಗಾವಲಾಗಿ ಬಂದು, ಅಲ್ಲಿಯೇ ಹಿಂದುಳಿದನು.

ಕಥಾಸೂತ್ರವನ್ನು ಪಾಠಕಮಹಾಶಯರು ಸರಿಯಾಗಿ ಹಿಡಿಯುವಂತೆ ಇಲ್ಲಿ ಕೆಲವು ಪ್ರಸ್ತಾಪಗಳನ್ನು ಹೇಳಬೇಕಾಗುವುದು. ಕ್ರಿ. ಶಕೆಯ ೧೩ನೆಯ ಶತಮಾನದ ಆದಿಯ ವರೆಗೆ ದಕ್ಷಿಣ ಹಿಂದುಸ್ಥಾನದ ಮೇಲೆ ಮುಸಲ್ಮಾನರ ದೃಷ್ಟಿಯು ಬಿದ್ದಿರಲಿಲ್ಲ. ಪಠಾನ ಸುಲ್ತಾನರು ಉತ್ತರ ಹಿಂದುಸ್ಥಾನದಲ್ಲೇ ಸರ್ವಶಕ್ತರಾಗಿದ್ದರಲ್ಲದೆ, ದಕ್ಷಿಣದಲ್ಲಿನ ಚಿಕ್ಕ ದೊಡ್ಡ ರಾಜ್ಯಗಳು ಸ್ವಾತಂತ್ರ್ಯಸುಖವನ್ನು ಅನುಭವಿಸುತ್ತಲಿದ್ದುವು. ಇಂತಹ ಸ್ವತಂತ್ರ ರಾಜ್ಯಗಳಲ್ಲಿ ಭಾವಿ ಮಹಾರಾಷ್ಟ್ರಸಾಮ್ರಾಜ್ಯದ ಅಂಕುರ ಸ್ವರೂಪವಾದ ಚಿಕ್ಕದೊಂದು ರಾಜ್ಯವಿತ್ತು. ದೇವಗಿರಿ ಎಂಬುದು ಇದರ ರಾಜಧಾನಿಯಾಗಿತ್ತು; ರಾಮದೇವ ಎಂಬವನು ರಾಜನಾಗಿದ್ದನು. ಈ ಮರಾಟಿ ರಾಜ್ಯವನ್ನು ಕುರಿತು ಜೀಯೂದ್ದೀನ್ ಬಾರ್ನಿ ಎಂಬ ತುರುಷ್ಕ ಇತಿಹಾಸಕಾರನು ಹೀಗೆಂದು ಬರೆದಿರುವನು— "ಈ ಮೊದಲು ಇಲ್ಲಿನ ಜನರು ಮುಸಲ್ಮಾನರನ್ನು ಕುರಿತು ಕೇಳಿರಲಿಲ್ಲ. ಮುಸಲ್ಮಾನ್ ಸೈನ್ಯವು ಇದಕ್ಕಿಂತ ಮೊದಲು ಮಹಾರಾಷ್ಟ್ರ ರಾಜ್ಯದಲ್ಲಿ ಪದಾರ್ಪಣ ಮಾಡಿರಲಿಲ್ಲ. ದೇವಗಿರಿ ನಗರವು ಚಿನ್ನ ಬೆಳ್ಳಿ ಮೊದಲಾದ ಅಮೂಲ್ಯ ವಸ್ತುಗಳಿಗೆ ತವರು ಮನೆಯಾಗಿತ್ತು. ಈ ವರ್ಣನೆಯು ಆ ರಾಜ್ಯಕ್ಕೆ ಮಾತ್ರವೇ ಸಲ್ಲುತ್ತಿರಲಿಲ್ಲ. ವಿದೇಶಿಯರು ಭಾರತಭೂಮಿಯಲ್ಲಿ ಕಾಲಿಡುವ ಮೊದಲು ಹಿಂದುಸ್ಥಾನದ ಸ್ಥಿತಿಯನ್ನು ಪ್ರತಿ ಒಬ್ಬ ಇತಿಹಾಸಕಾರನು ಇಂತಹ ಮಾತುಗಳಲ್ಲಿಯೇ

ವರ್ಣಿಸಿರುವನು. ಈ ಧನವೇ ವಿದೇಶಿಯರ ಮತ್ಸರದೃಷ್ಟಿಗೆ ಬಿದ್ದುದರಿಂದ, ದಿಲ್ಲಿಯ ಅಂದಿನ ಚಕ್ರವರ್ತಿಯಾದ ಜಲಾಲ್‌ವುದ್ದೀನ್ ಖಿಲ್ಜಿಯ ಅಳಿಯನಾದ ಅಲ್ಲಾವುದ್ದೀನ್ ಖಿಲ್ಜಿಯ ಮಹಾ ಸೈನ್ಯದೊಡನೆ ಕ್ರಿ. ಶಕೆಯ ೧೨೯೪ರಲ್ಲಿ ದಖ್ಖಣಕ್ಕೆ ದಂಡೆತ್ತಿಹೋದನು. ಅಲ್ಲಾವುದ್ದೀನನು ಮಹಾಸೈನ್ಯದೊಡನೆ ದೇವಗಿರಿಯನ್ನು ಎರಡು ಸಲ ಮುತ್ತಿಗೆ ಹಾಕಿ ಹತಾಶನಾಗಿ, ಮೂರನೆಯ ಸಲ ಅದರ ಕೋಟೆಯ ಬಾಗಿಲಲ್ಲಿ ಕುಳಿತುಕೊಂಡಿದ್ದು ಪ್ರಕೃತದಲ್ಲಿ ಜಾರುವಂತಿದ್ದನು.

ರಾಮದೇವ ರಾಜನಿಗೆ ಬಲಗೈಯಂತಿದ್ದು ಯುದ್ಧದಲ್ಲಿಯೂ ರಾಜ್ಯ ವಿಸ್ತರಣದಲ್ಲಿಯೂ ಅವನಿಗೆ ಸಹಾಯ ಮಾಡಿದ್ದ ಸರದಾರನೊಬ್ಬನು ಈ ಮುತ್ತಿಗೆಯ ಕಾಲದಲ್ಲಿ ಮಡಿದು ಹೋದನು. ಈ ಸರದಾರನು ತನ್ನ ಪುತ್ರೀರತ್ನವಾದ ವೀರಮತಿಯ ವಿವಾಹಕ್ಕೆ ಎಲ್ಲವನ್ನು ಸಿದ್ಧಪಡಿಸಿದ್ದನು. ವೀರಮತಿಯು ಕಾಳಿಕಾದೇವಸ್ಥಾನದ ಬಳಿಯಲ್ಲಿ ಯಾರೊಡನೆ ಮಾತನಾಡಿದಳೊ ಆ ಯುವಕನು ತನ್ನ ಪ್ರಾಣೇಶ್ವರನೆಂದು ಆರಿಸಲ್ಪಟ್ಟಿದ್ದನು. ಕೃಷ್ಣರಾಜನು ತನ್ನ ಅಳಿಯನಾಗುವುದು ವೀರಮತಿಯ ತಂದೆಗೆ ಏನು ಕಾರಣದಿಂದಲೋ ಮೊದಲು ಯೋಗ್ಯವಾಗಿ ತೋರಲಿಲ್ಲ. ಕೊನೆಗೆ ಮಗಳ ನಿರ್ಬಂಧದಿಂದ ಅವನು ಸನ್ಮತಿ ಕೊಟ್ಟನು. ಆದರೆ ಪ್ರಕೃತದ ಅವನ ಅಕಾಲಿಕ ಮರಣದಿಂದ ವೀರಮತಿಯ ಲಗ್ನಕ್ಕೆ ವಿಘ್ನ ಬಂದಿತು. ಈಗ ವೀರಮತಿಯು ತಂದೆಯ ಮರಣಕ್ಕೆ ಪ್ರತಿಕಾರವನ್ನು ಮಾಡಿದ ಹೊರತು, ಲಗ್ನಮಂಟಪವನ್ನು ಸೇರುವುದಿಲ್ಲ ಎಂದು ನಿಶ್ಚಯ ಮಾಡಿದಳು. ಅದಕ್ಕೋಸ್ಕರವೇ ಅವಳು ಅರಸನ ಮಗಳಾದ ಗೌರಿಯೊಡನೆ ಕಾಳಿಕಾಪೂಜೆಗೆ ಹೋಗಿದ್ದಳೆಂದು ಪಾಠಕ ಮಹಾಶಯರು ಈಗ ತಾನೇ ತಿಳಿಯಬಹುದು.

“ಭಾರತಭೂಮಿಯ ಸೌಭಾಗ್ಯಭಂಡಾರವನ್ನು ಸೂರೆಗೊಂಡು, ತಮ್ಮ ವಂಶಸ್ಥರ ನಾಮವನ್ನೂ ತನ್ನುಹೆಸರನ್ನೂ ಇತಿಹಾಸಪುಟದಲ್ಲಿ ಕಳಂಕಿತವಾಗಿ ಮಾಡಿದ ಮುಸಲ್ಮಾನರಲ್ಲಿ ಘಜ್ನಿಮಹಮ್ಮದ್, ಅಲ್ಲಾವುದ್ದೀನ್ ಖಿಲ್ಜಿ ತೇಮೂರಲೇನ್ ಈ

ಮೂವರಿಗಿಂತಲೂ ಅಧಮರು ಯಾರೂ ಇಲ್ಲ” ಎಂದು ಒಬ್ಬ ಬಂಗಾಳೆಯ ಚರಿತ್ರಕಾರನು ಹೇಳುವನು. ಈ ಮೂವರು ತಾವು ಕಾಲಿಟ್ಟ ಭೂಮಿಯಲ್ಲಿ ಆರ್ಯಧರ್ಮಾವಲಂಬಿಗಳಾದ ಆಬಾಲ ವೃದ್ಧರನ್ನು ಕೊಂದು, ಪವಿತ್ರವಾದ ದೇವಸ್ಥಾನಗಳ ಮುಂದುಗಡೆಯಲ್ಲಿ ಪಶುರಕ್ತವನ್ನು ಬಸಿದು, ಆರಾಧಿತವಾದ ವಿಗ್ರಹಗಳನ್ನು ಮಸೀದಿಯ ಸೋಪಾನಗಳಿಗಾಗಿ ಹಾಸಿ, ನಂದನವನದಂತೆ ಇದ್ದ ಪ್ರದೇಶಗಳನ್ನು ಶ್ಮಶಾನದಂತೆ ಮಾಡಿ, ಹೊಟ್ಟೆಯೊಳಗಿದ್ದ ಹಾಲನ್ನು “ಒಂದೇ ಬಾರಿ ಸುರಿಗೊಂಬ” ತವಕದಿಂದ ಭಾರತಧೇನುವಿನ ಉದರವನ್ನು ಸೀಳಿಬಿಟ್ಟರು. ಇವರು ನಡೆದ ಮಾರ್ಗಗಳೆಲ್ಲಾ ಸಿಡಿಲು ಬಡಿದ ಬೆಟ್ಟದಾರಿಗಳಂತೆ ಆದುವು; ನುಗ್ಗಿದ ನಗರಗಳೆಲ್ಲಾ ಅಡನಿಯ ಗುಹೆಗಳಂತೆ ಆದುವು. ಇವರ “ದೀನ್! ದೀನ್!” ಎಂಬ ರಣಕೋಲಾಹಲವನ್ನು ಕೇಳುತ್ತಲೇ ಹಳ್ಳಿಪಳ್ಳಿಗರು ತಾವು ತಿಂದುಳಿಡೆ ಕೊಂಚ ಹಣವನ್ನು ಉಡಿಯಲ್ಲಿ ಕಟ್ಟಿಕೊಂಡು, ಹುಲಿ ಹಾವುಗಳಿದ್ದ ಅಡವಿಗಾದರೂ ಒಕ್ಕಲು ಹೋಗುತ್ತಿದ್ದರು. ರಾಜಯುವತಿಯರು ತಮ್ಮ ವೀರಪತಿಗಳನ್ನು ಇವರೊಡನೆ ಯುದ್ಧಕ್ಕೆ ಸಶಸ್ತ್ರರಾಗಿ ಕಳುಹಿಸಿ, ತಮ್ಮ ಪಾತಿವ್ರತ್ಯವನ್ನು ರಕ್ಷಿಸುವುದಕ್ಕೆ ನಗುನಗುತ್ತ ಚಿತಿಯನ್ನು ಏರುತ್ತಿದ್ದರು. ಇವರು ಮಾಡಿದ ಹಾಳು ಹಾವಳಿ ಎಷ್ಟೆಂದು “ತುರುಕರು ತುಳಿದಲ್ಲಿ ತರಕಾರಿ ಬೆಳೆಯದು” ಎಂಬ ಗಾದೆಯೇ ತೋರಿಸುವುದು. ಅದರೂ ಧರ್ಮಾಂಧರಾದ ಈ ಮೂವರಲ್ಲಿ ಇಷ್ಟೊಂದು ಪ್ರಭೇದವಿತ್ತು; ಅವರ ಕಾರ್ಯಗಳಲ್ಲಿ ಸಾಮ್ಯವಿದ್ದರೂ ಅವರ ಉದ್ದೇಶಗಳಲ್ಲಿ ಇಷ್ಟೊಂದು ತಾರತಮ್ಯವಿತ್ತು. ತೇಮೂರಲೇನನು ಅತ್ಯಂತ ಧನಾಪೇಕ್ಷೆಯುಳ್ಳವನು. ಆ ಅಸೆಯು ತೀರುವ ತನಕ ಅವನು ಹಸಿದ ಸಿಂಹ; ಹಸಿವು ಅಣಗುವುದಕ್ಕೆ ಕೈಗೆ ಸಿಕ್ಕಿದ ಕೊಳ್ಳೆಯನ್ನು ಹೊಡೆದುಬಿಡುತ್ತಲೇ ತೃಪ್ತಿಗೊಂಡು, ದೂರದ ಗವಿಗೆ ಹಿಂತಿರುಗಿದನು. ಘಜ್ನಿ ಮಹಮ್ಮದನು ಧನಾಪೇಕ್ಷೆಯೊಡನೆ ಧರ್ಮಾಂಧತೆಯನ್ನು ಬೆರಸಿದ್ದನು. ಹಿಂದೂ ಜನರ ಬೊಕ್ಕಸವನ್ನು ಬಿಚ್ಚಿ, ಅವರ ದ್ರವ್ಯಾಪಹಾರವನ್ನು ಮಾಡುವುದು ಮಾತ್ರವಲ್ಲ, ಅವರ ಆರ್ಯಧರ್ಮವನ್ನು ನಿರ್ಮೂಲಿಸಿ, ತನ್ನ ಮತವನ್ನು ಖಡ್ಗಮುಖದಿಂದ ಸ್ಥಾಪಿಸಬೇಕಂದು

ಬದ್ಧಕಂಕಣನಾದನು. ಇದಕ್ಕೋಸ್ಕರವೇ ಈತನು ಹನ್ನೊಂದು ಸಲ ಹಿಂದುಸ್ಥಾನಕ್ಕೆ ದಂಡೆತ್ತಿ ಬಂದುದು ಸಾಲದೆ, ಕೊನೆಗೆ ಕ್ರಿ. ಶ. ೧೦೨೪ರಲ್ಲಿ ಗುಜರಾತಿನಲ್ಲಿದ್ದ ಸೋಮನಾಥ ದೇವಸ್ಥಾನವನ್ನು ಒಳನುಗ್ಗಿ ವಿಗ್ರಹಗಳನ್ನು ಪುಡಿಪುಡಿಗೈದನು. ಆದರೂ "ಪರದ್ರವ್ಯಾಪಹಾರಿ" "ಅನ್ಯಮತಭಂಜಕ" ಎಂಬ (ಮಹಾ+ಅಯೋಗ್ಯ?) ಬಿರುದುಗಳನ್ನು ತಾಳಿದಬಳಿಕ ತನ್ನ ದೇಶಕ್ಕೆನೇ ಹಿಂತೆರಳಿದನು. ಅಲ್ಲಾವುದ್ದೀನನಾದರೊ, ತನ್ನ ಹಾಳು ಜೀವಕಾಲದಲ್ಲಿ ಮೂರು ಉದ್ದೇಶಗಳನ್ನು ಕೊನೆಗಾಣಿಸುವುದಕ್ಕ ಯತ್ನಿಸಿದನು. ತೇಮೂರಲೇನನ ಧನಾಪೇಕ್ಷೆಯೂ, ಮಹಮ್ಮದನ ಮತಾಭಿಮಾನವೂ, ಮಾತ್ರವಲ್ಲ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ರಾಜದಂಡವನ್ನು ಬೀಸಬೇಕೆಂಬ ರಾಜ್ಯಾಕಾಂಕ್ಷೆಯೂ ಈತನ ಹೃದಯದಲ್ಲಿ ಬೇರೂರಿದ್ದುವು. ಈ ಅಭಿಲಾಷೆಯು ಹುಟ್ಟು ಬಂಜೆಗೆ ಮಕ್ಕಳಾಗಬೇಕೆಂಬ ಆಸೆಯಾಗಿರಲಿಲ್ಲ. ಅಲ್ಲಾವುದ್ದೀನನು ಮಹಾವೀರನಾಗಿದ್ದನು ಎಂಬುದೇನೋ ನಿಜ; ಆದರೆ ಬಾಲ್ಯದಿಂದಲೂ ನ್ಯಾಯನೀತಿಗಳ ಚಿಂತೆಯೆನ್ನು ಇವನು ಕಟ್ಟಿಕೊಳ್ಳದೆ ಇದ್ದುದರಿಂದ, ಕೆಲವು ಕಾಲ ಮಾತ್ರನೇ ಬಳೆಯುತ್ತ ಹೋದನು. ಹೊಕ್ಕುಳಿನ ತ್ರಯೋಜನವನ್ನು ಅರಿಯದ ಈ ಕೃತಘ್ನನು ಯಾವ ಸೋಪಾನಗಳನ್ನು ಹತ್ತಿ ಶಿಖರಕ್ಕೆ ಏರಿದನೋ, ಅವುಗಳನ್ನೇ ಧಿಕ್ಕಾರದೃಷ್ಟಿಯಿಂದ ಮೇಲೆ ನಿಂತು ನೋಡುತ್ತಿದ್ದನು. ಯಾವ ಮರದ ಕೊಂಬೆಯ ಮೇಲೆ ತನ್ನ ಕೈ ಕೊಡಲಿಯನ್ನು ತಿಕ್ಕಿ ಹರಿತನಾಗಿ ಮಾಡಿದನೊ, ಆ ವೃದ್ಧವೃಕ್ಷನನ್ನೇ ಕಡಿದುಹಾಲಿಕ್ಕೆ ಇವನು ಹೇಸಲಿಲ್ಲ. ತನ್ನನ್ನು ಉನ್ನತ ಪದವಿಯಲ್ಲಿಟ್ಟ ತನ್ನ ಮಾವನಾದ ಜಾಲಾಲುದ್ದೀನ್ ಖಿಲ್ಜಿಯನ್ನು ರಾಜಾಭಿಲಾಷೆಯಿಂದ ಸಂಹರಿಸುವುದಕ್ಕೆ ಯಾವನು ಹಿಂಜರಿಯಲಿಲ್ಲವೋ, ಸಿಂಹಾಸನವನ್ನು ಹತ್ತುವುದಕ್ಕೆ ಹೋಗಬೇಕಾದ ಮಾರ್ಗದಲ್ಲಿದ್ದ ತನ್ನ ಬಂಧುಬಾಂಧವರನ್ನೂ ಗುರುಹಿರಿಯರನ್ನೂ ನೆಲ್ಲು ಹುಲ್ಲಿನಂತೆ ಕೊಯ್ದು ಬಿಟ್ಟು ಯಾವನು ಮುಂದೆ ಗದ್ದುಗೆಯನ್ನು ಏರಿದನೋ, ಆ ವಿಶ್ವಾಸಘಾತುಕನೇ, ಆ

ಪರಮಪಾಪಿಯೇ ಆತುಲ ಸೈನಿಕರೊಡನೆ ದೇವಗಿರಿಯ ಮುತ್ತಿಗೆಯನ್ನು ತೆಗೆದು ಓಡುವಂತಿದ್ದನು.

ಈ ಸಂಕಷ್ಟಕರವಾದ ಸಮಯವನ್ನು ಹೇಗೆ ಇದಿರಿಸಬೇಕೆಂಬ ವಿಷಯದಲ್ಲಿ ರಾಮದೇವರಾಜನು ತನ್ನ ಸ್ನೇಹಿತ ಸರದಾರರ ಆಲೋಚನೆಯನ್ನು ವಿಚಾರಿಸಿದನು. ರಾಮದೇವನ ಅಳಿಯನಾದ ಹರಪಾಲದೇವನು ಕೋಟೆಯನ್ನು ದಾಟಿ ಯುದ್ಧಕೊಡುವುದು ನ್ಯಾಯವಲ್ಲವೆಂದು ಹೇಳಿದರು. ಈ ಮಾತು ರಾಜನಿಗೆ ಸಮ್ಮತಿಯಾಯಿತು. "ಅಲ್ಲಾವುದ್ದೀನನು ಎರಡು ಸಲ ಸೋತು ಹೋದನು. ಮೂರನೆಯ ಸಲ ಹಾಕಿದ ಮುತ್ತಿಗೆಯನ್ನು ತಾನೇ ತೆಗೆದು ಈಗ ಪಲಾಯನ ಮೂಡುತ್ತಲಿರುವನು. ತಾನಾಗಿ ಹೀಯಾಳಿಸಿ ಶತ್ರುವನ್ನು ಕೆರಳಿಸಿ ಹೋಗುವ ಮಾರಿಯನ್ನು ಕರೆದು, ನಮ್ಮ ಸೈನ್ಯವನ್ನು ಆಪತ್ತಿಗೆ ಗುರಿಮಾಡುವುದು ಶ್ರೇಯಸ್ಕರವಲ್ಲ ಇದಲ್ಲದೆ ಅಲ್ಲಾವುದ್ದೀನನು ಯಾವ ಕಾರಣದಿಂದ ಪಲಾಯನ ಮಾಡುತ್ತಿರುವನೆಂದು ತಿಳಿಯಬೇಕು, ಅಭೇದ್ಯವಾದ ಕೋಟೆಯೊಳಗೆ ಸುರಕ್ಷಿತವಾಗಿದ್ದ ನಮ್ಮನ್ನು-ಹಾವಾಡಿಗನು ಕೊಳಲೂದಿ ಬಿಲದಿಂದ ಹಾವನ್ನು ಹೊರಡಿಸುವಂತೆ— ಅವನು ಸೆಳೆಯಬೇಕೆಂಬ ಉಪಾಯಮಾಡಿದ್ದರೆ, ನಮ್ಮ ಸೈನ್ಯವೆಲ್ಲಾ ನಿರರ್ಥಕವಾಗಿ ಶತ್ರುಹಸ್ತದಿಂದ ಸಂಹಾರವಾಗಬಹುದು" ಎಂದು ರಾಮದೇವನು ಅಳಿಯನ ಅಭಿಪ್ರಾಯವನ್ನು ಬಲಗೊಳಿಸಿದನು. ಈ ಮಾತು ಕೃಷ್ಣರಾಜನಿಗೆ ಯಾವ ಕಾರಣದಿಂದಲೊ ಸಮ್ಮತವಾಗಲಿಲ್ಲ, ಅವನು ಯುದ್ಧಮಾಡಲೇಬೇಕೆಂದು ನಿಂತುಬಿಟ್ಟನು. "ಅಲ್ಲಾವುದ್ದೀನನು ಈಗ ಹಿಮ್ಮೆಟ್ಟಿದರೂ ಮತ್ತೆ ಮತ್ತೆ ಬಾರದೆ ಇರಲಾರನು. ಯಾರೂ ಬಾರದೆ ಹೋದರೂ, ನಮ್ಮ ಸೈನ್ಯವನ್ನು ನಾನೊಬ್ಬನೇ ಕೋಟೆಯ ಹೊರಕ್ಕೆ ಕೊಂಡುಹೋಗಿ, ಶತ್ರುವು ಯಾವ ಉಪಾಯದಿಂದಲಾದರೂ ನನಗೆ ತಲೆಬಾಗಿಸುವಂತೆ ಮಾಡಿ, ದೇವಗಿರಿರಾಜ್ಯವು ನನ್ನನ್ನು ಚಿರಕಾಲ ಸ್ಮರಿಸುವಂತೆ ಮಾಡುವೆನು" ಎಂದು ಕೃಷ್ಣರಾಜನು ಹೇಳಿದನು. ಈ ಅಭಿಪ್ರಾಯಗಳಲ್ಲಿ ಯಾವುದನ್ನು ಸ್ವೀಕರಿಸಬೇಕೆಂದು ತಿಳಿಯದೆ, ರಾಜನು ವೀರಮತಿಯ ಮುಖವನ್ನು ದೃಷ್ಟಿಸಿದನು.

ಪ್ರಾಚೀನ ಕಾಲದಲ್ಲಿ ಭಾರತಸ್ತ್ರೀಯರ ಸ್ವಾತಂತ್ರ್ಯಕ್ಕೆ ಯಾವುದೊಂದು ನಿರ್ಬಂಧವಿಲ್ಲದೆ ಇದ್ದುದರಿಂದ, ವೀರರಮಣಿಯರು ಇಂತಹ ಸಂದರ್ಭಗಳಲ್ಲಿ ತಮ್ಮ ಆಲೋಚನೆಯಿಂದಲೂ, ಆಯುಧದಿಂದಲೂ ರಾಜ್ಯಾಧಿಕಾರಿಗಳಿಗೆ ಸಹಾಯ ಮಾಡುತ್ತಿದ್ದರು. ಕಾಮದೇವನು ಸಾಕೂತದೃಷ್ಟಿಯಿಂದ ತನ್ನನ್ನು ನೋಡುತ್ತಲೇ ವೀರಮತಿಯು ಉತ್ಸಾಹಿತಳಾಗಿ ಹೀಗೆಂದಳು—"ನನ್ನ ಪ್ರಾಣವಲ್ಲಭನ ಅಭಿಪ್ರಾಯವು ವಿದಿತವಾಗಿದೆ. ಅಲ್ಲಾವುದ್ದೀನನನ್ನು ಈಗ ಜಾರಬಿಟ್ಟರೆ, ರಕ್ತದ ರುಚಿಹತ್ತಿದ ಹುಲಿಯು ಮತ್ತೆಮತ್ತೆ ಗ್ರಾಮಗಳಿಗೆ ಬಂದು, ಹಳ್ಳಿಗರನ್ನು ಹೆದರಿಸುವಂತೆ; ಅವನು ಮರಳಿಮರಳಿ ಇಲ್ಲಿಗೆ ಬರುವವನಲ್ಲವೆ? ಇದಲ್ಲದೆ ನನ್ನ ಜನ್ಮದಾತಾರನಾದ ತಂದೆಯು ಶತ್ರುವಿಂದ ರಣರಂಗದಲ್ಲಿ ಬಿದ್ದು ಹೋದನೆಂಬ ದುಃಖಾಗ್ನಿಯು ನನ್ನ ಹೃದಯವನ್ನು ಪದೇಪದೇ ದಹಿಸುತ್ತಿರುವುದು. ಶತ್ರುವಿನ ರಕ್ತಸೇಚನದಿಂದ ಈ ಅಗ್ನಿಯು ಶಾಂತವಾಗ ಬೇಕಾದುದರಿಂದ, ನನ್ನ ಪ್ರಾಣೇಶ್ವರನು ಸೈನ್ಯದ ವಿಶೇಷ ಭಾಗವನ್ನು ಈ ರಾತ್ರಿ ಕೋಟೆಯ ಹೊರಕ್ಕೆ ಕೊಂಡುಹೋಗುವಂತೆ ಅಪ್ಪಣೆಯಾಗಬೇಕೆಂದು ಪ್ರಾರ್ಥಿಸುವೆನು. ಇವನ ಸಹಾಯಕಳಾಗಿ ಹೋಗಲಿಕ್ಕೆ ನನಗೂ ಆಜ್ಞೆಯಾಗಬೇಕೆಂದು ವಿಜ್ಞಾಪಿಸುವೆನು." ರಾಮದೇವನು ಮೊದಲಿನ ಎರಡು ಯುದ್ಧಗಳಲ್ಲಿಯೂ ಕೃಷ್ಣರಾಜನ ಸಾಹಸವನ್ನೂ ಚಾತುರ್ಯವನ್ನೂ ಕಣ್ಣಾರೆ ಕಂಡಿದ್ದುದರಿಂದ, ಕೃಷ್ಣರಾಜನು ಸೇನೆಯ ಹೆಚ್ಚಿನ ಭಾಗವನ್ನು ಆ ರಾತ್ರಿ ಹೊರಗೆ ಕೊಂಡುಹೋಗಿ ಯುದ್ಧ ಮಾಡುವುದಕ್ಕೆ ರಾಮದೇವನು ಸಮ್ಮತಿಸಿ, ತಾನು ಅವನೊಡನೆ ಹೊರಡಲಿಕ್ಕೆ ಸಿದ್ಧನಾದನು. ಆದರೆ ವೀರಮತಿಯು ಸೈನ್ಯದೊಡನೆ ಹೊರಕ್ಕೆ ಹೋಗುವುದು ಯೋಗ್ಯವಲ್ಲವೆಂದು ಬಹುಪಕ್ಷದವರ ಮತವಾಯಿತು.

ದೇವಗಿರಿ ದುರ್ಗವು ಪುರಾತನ ಕಾಲದಲ್ಲಿ ಮಹಾಪ್ರಖ್ಯಾತಿಗೊಂಡಿತು. ಕಡಲು ಮಟ್ಟಕ್ಕಿಂತ ೬೪೦ ಅಡಿ ಎತ್ತರಕ್ಕೆ ಏರಿದ ಏಕಾಕಿಯಾದ ಪರ್ವತದ ಮೇಲೆ ಅದು ಇದ್ದಿತ್ತು. ಈ ಪರ್ವತವು ಸೂಚ್ಯಾಕಾರವಾಗಿದ್ದು (cone-shaped) ಸುತ್ತಲೂ ಪ್ರಪಾತಮಯವಾದ ಬಂಡೆಗಳಿಂದ ಭದ್ರವಾಗಿತ್ತು ಲಂಬಾಯಮಾನವಾದ

ಪ್ರಾಕಾರಗಳು, ಉನ್ನತವಾದ ತೆನೆಗಳು, ವಿಸ್ತಾರವಾದ ಪರಿಗೆಯ ಕೋಟೆಯನ್ನು ಬಲಪಡಿಸಿದ್ದುವು. ದೂರದೃಷ್ಟಿಗೆ ಈ ದುರ್ಗವು ಒಂದೇಯಾಗಿ ತೋರಿದ್ದರೂ, ಇದರಲ್ಲಿ ಒಂದರ ಒಳಗೊಂದಾಗಿ ಮೂರು ಕೋಟೆಗಳಿದ್ದುವು. ದುರ್ಗದ ಅಡಿಯಲ್ಲಿ ದೇವಗಿರಿ ನಗರವು ಹುದುಗಿಕೊಂಡು ಭದ್ರವಾಗಿತ್ತು. ಇಂತಹ ಕೋಟೆಯನ್ನು ಶತ್ರುವು ಮಹಾ ಸೈನ್ಯದೊಡನೆ ೧೦ ವರ್ಷಗಳ ವರೆಗೆ ಮುತ್ತಿದರೂ ರಾಮರಾಜನು ಸುಖವಾಗಿಯೂ ನಿರಾಂತಕವಾಗಿಯೂ ನಿದ್ದೆಹೋಗಬಹುದಿತ್ತು. ಮುಸಲ್ಮಾನರ ಸೇನಾ ಸಮುದ್ರವು ಉತ್ತರ ಹಿಂದುಸ್ಥಾನದ ಮೇರೆಯನ್ನು ಅತಿಕ್ರಮಿಸಿ, ಚಿರಕಾಲ ದೇವಗಿರಿಯ ಪ್ರಾಕಾರಗಳ ಮೇಲೆ ಬಂದು ಬಡಿದರೂ, ಅದರ ಸ್ವಾತಂತ್ರ್ಯವು ಮುಳುಗಿ ನಾಶವಾಗುತ್ತಿದ್ದಿಲ್ಲ. ವಿಧಾತೃನು ಮಾತ್ರ ಹಾಗೆ ಎಣಿಸಿರಲಿಲ್ಲ.

ಮಧ್ಯರಾತ್ರಿ ಅಷ್ಟಮಿಯ ಚಂದ್ರನು ದುಃಖದಿಂದ ಅಸ್ತಮಿಸುತ್ತಲಿದ್ದನು. ಅಂಧಕಾರವು ಮೆಲ್ಲಮೆಲ್ಲನೆ ದೇವಗಿರಿಯ ಹೊರವಳಯವನ್ನೆಲ್ಲಾ ಆಕ್ರಮಿಸಿಕೊಳ್ಳತೊಡಗಿತು. ದೇವಗಿರಿಯ ಪಾಳಯದಲ್ಲಿ ಕಾವಲುಗಾರರು ದೀವಟಿಗೆಗಳನ್ನು ಹಿಡಿದುಕೊಂಡು ಅತ್ತಿತ್ತ ತಿರುಗುತ್ತಿದ್ದರು. ವೀರರು ಶಸ್ತ್ರ ಕವಚಗಳನ್ನು ತೊಟ್ಟುಕೊಳ್ಳುವ ಝಣತ್ಕಾರ, ಯುದ್ಧಾಶ್ವಗಳ ಹೇಷಧ್ವನಿ, ಭಟರ ಕಲಕಲ—ಇವೆಲ್ಲಾ ನಿಶ್ಶಬ್ದವಾದ ರಾತ್ರಿಯ ಕರ್ಣವನ್ನು ಭೇದಿಸಿ ಹೋಗುವಂತಿದ್ದುವು. ರಾಮದೇವನು ತಾನೇ ಪಾಳಯದಲ್ಲಿ ಸಂಚರಿಸುತ್ತ, ಪ್ರಾತಃಕಾಲದ ಯುದ್ಧಕ್ಕೆ ಸೈನಿಕರಲ್ಲಿ ಭೀತರಾದವರನ್ನು ಉತ್ಸಾಹಗೊಳಿಸುತ ಶತ್ರುಚಲನೆಯನ್ನು ತಿಳಿಯುವುದಕ್ಕೆ ನೆಲಕ್ಕೆ ಒರಗಿ, ಕಿವಿ ಕೊಡುತಿದ್ದನು. ಅಲ್ಲಾವುದ್ದೀನನ ಪಾಳಯವು ದುರ್ಗದಿಂದ ೧೦ ಮೈಲು ದೂರವಿದ್ದುದರಿಂದ ಶತ್ರುಚಲನೆಗಳೇನೂ ತೋರುತ್ತಿರಲಿಲ್ಲ. ಕೃಷ್ಣರಾಜನು ತಾನೇ ಮುಂದು ಹೋಗಿ ಪರೀಕ್ಷಿಸುವೆನೆಂದು ಹೇಳಿ ಕೋಟೆಯ ಗೋಡೆಯನ್ನು ಹತ್ತಲು ಹೋದನು.

ಅಲ್ಲಾವುದ್ದೀನನ ಸೈನಿಕರೆಲ್ಲರು ಗಾಂಜಾವಿನ ಬಲದಿಂದ ಸುಖವಾಗಿ ನಿದ್ದೆಹೋಗುತ್ತಿದ್ದರು. ಅಲ್ಲಲ್ಲಿ ಒಬ್ಬಿಬ್ಬರು ಕಾವಲುಗಾರರು ಪಹರೇ ಮಾಡುತ್ತಿದ್ದರು. ಇಷ್ಟರಲ್ಲಿ ಅಲ್ಲಾವುದ್ದೀನನ ಪಾಳಯದಲ್ಲಿ ಒಂದು ದೀಪವನ್ನು ಯಾರೋ ಹಚ್ಚಿದರು. ಡೇರೆಯ ಒಳಗೆ ಒಬ್ಬ ಯುವಕನು ಏನನ್ನೋ ಆಲೋಚಿಸುತ್ತ ಕುಳಿತುಕೊಂಡಿದ್ದನು. ಬಳಿಕ ಹೊರಗೆ ಬಂದು ಯಾರನ್ನೋ ಹುಡುಕಿದಂತೆ ಅತ್ತಿತ್ತ ನೋಡಿಕೊಂಡು ನಿಂತನು. ಶೀತಲವಾದ ಗಾಳಿ ಬೀಸುತ್ತಿತ್ತು. ಆಕಾಶದಲ್ಲಿ "ಸಹಸ್ರ ರತ್ನಗಳು" ಮಿನುಗುತ್ತಿದ್ದುವು. ಯುವಕನು ಪುನಃ ಡೇರೆಯೊಳಗೆ ಹೋಗಿ ಕುಳಿತುಕೊಂಡನು. ಯುವಕನ ಹೆಸರು ಮಾಲಿಕ್ ನಾಯಬ್ ಕಾಫರ್. ಹಿಂದುಸ್ಥಾನದ ಇತಿಹಾಸದಲ್ಲಿ ಈ ಹೆಸರೇ ಮಾಲಿಕ್ ಕಾಫರ್ ಎಂದು ಸಂಕ್ಷೇಪವಾಗಿರುವುದು. ಈ ಮಾಲಿಕ್ ಕಾಫರನು ಮೊತ್ತಮೊದಲು ಅಲ್ಲಾವುದ್ದೀನನ ಗುಲಾಮನಾಗಿದ್ದು ಅವನ ದಯೆಯಿಂದಲೇ ಸೈನ್ಯದಲ್ಲಿ ಉಚ್ಚpದನಿಯನ್ನು ಪಡೆದಿದ್ದನು. ಮುಸಲ್ಮಾನರ ದುರ್ಗುಣಗಳೆಲ್ಲಾ ಇವನಲ್ಲಿ ಹಾಸುಹೊಕ್ಕಾಗಿದ್ದುವು. ಅಲ್ಲಾವುದ್ದೀನನು ಈ ಪಾಪಿಯಲ್ಲಿ ಹೆಚ್ಚಾದ ವಿಶ್ವಾಸವಿಟ್ಟಿದ್ದನು; ಅವನನ್ನೇ ತನ್ನ ಸೇನಾಧಿಪತಿಯನ್ನಾಗಿ ಮಾಡಿದ್ದನು; ಅವನ ವಚನವನ್ನು ಕುರಾನಿನಂತೆ ಪಾಲಿಸುತ್ತಿದ್ದನು. ಅಲ್ಲಾವುದ್ದೀನನ್ನು ರಾಜ್ಯಾಭಿಲಾಷೆಯಿಂದ ಲೋಕಾಂತರಕ್ಕೆ ಕಳುಹಿಸಿದ ವಿಶ್ವಾಸಘಾತಕನು ಈತನೇ. ಮಾಲಿಕ್ ಕಾಫರನು ಹೊರಕ್ಕೆ ಬಂದು ಅಲ್ಲಲ್ಲಿ ವಿಹರಿಸುತ್ತಿದ್ದನು. ರಾತ್ರಿಯು ಮೆಲ್ಲಮೆಲ್ಲನೆ ಸರಿಯುತ್ತ ಬಂದಿತು. ಮುಸಲ್ಮಾನರ ಸೈನ್ಯದಲ್ಲಿ ಒಬ್ಬಿಬ್ಬರು ಎಚ್ಚರವಾಗುತ್ತಿದ್ದರು. ಮಾಲಿಕ್ ಕಾಫರನು ಡೇರೆಯೆ ಸಮೀಪದಲ್ಲಿದ್ದ ಮರದ ತೋಪಿನ ಬಳಿಯಲ್ಲಿ ಬಂದು ನಿಂತನು. ಅಷ್ಟರಲ್ಲಿ ಅವನ ಇದಿರಿಗೆ ಯಾರೋ ಒಬ್ಬನು ಕಾಲ್ನಡೆಯಾಗಿ ಬರುತ್ತಿದ್ದನು. ಮಾಲಿಕ್ ಕಾಫರನು ಆಗಂತುಕನನ್ನು[1] ನೋಡಿ ಸಲಾಂ ಮಾಡಿದನು.

---

[1] ಬಂದವನು.

ಮಾಲಿಕ್ ಕಾಫರನು ಆಗುಂತುಕನ ಬಳಿಗೆ ಬಂದು, "ನಿನ್ನೊಡನೆ ಮತ್ತಾರೂ ಬಂದಿದ್ದರೇ?" ಎಂದನು.

ಆಗಂತುಕನು ಸುತ್ತಲೂ ನೋಡುತ್ತ, "ಇಲ್ಲ. ನಾನು ಬಂದುದು ಯಾರೂ ತಿಳಿಯಲು ಕಾರಣವಿಲ್ಲ" ಎಂದನು.

**ಮಾಲಿಕ್ ಕಾಫರ್**—"ನಿನ್ನ ಹಿಂದೆಯೇ ಏನೋ ದೂರದಲ್ಲಿ ನಿನ್ನ ನೆರಳಂತೆ ತೋರಿತು. ಇಷ್ಟು ವಿಳಂಬವೇಕಾಯಿತು?"

**ಆಗಂತುಕ**—"ಮಧ್ಯಾಹ್ನದಲ್ಲಿ ನಿನ್ನನ್ನು ನೋಡಿದ ಬಳಿಕ ಅರಮನೆಯ ಕಾರ್ಯಗೌರವದಿಂದ ತಳುವಿದೆನು."

**ಮಾಲಿಕ್ ಕಾಫರ್**—"ನೀನು ಹಗಲು ನನಗೆ ಮಾತು ಕೊಟ್ಟಂತೆ. ದೇವಗಿರಿಯ ಸೈನ್ಯನನ್ನು ಹೊರಕ್ಕೆ ಇಳಿಸಿರುವೆಯ?"

ಎಲೆಯ ಮರಮರ ಶಬ್ದದಂತೆ ಹತ್ತಿರದಲ್ಲಿ ಕೇಳಿಸಿತು.

**ಆಗಂತುಕ**—"ಕೊಟ್ಟ ಮಾತನ್ನು ಮರೆಯಲಾರೆನು. ಅರಮನೆಯನ್ನು ಕಾಯುವಷ್ಟು ಕೈತುಂಬಾ ಸೈನಿಕರನ್ನು ಹಿಂದೆ ಬಿಟ್ಟು, ಮಿಕ್ಕ ಸೈನ್ಯವನ್ನು ಹೊರಕ್ಕೆ ಹೊರಡಿಸಿರುವೆನು."

**ಮಾಲಿಕ್ ಕಾಫರ್**— "ಹಾಗಾದರೆ ನಮ್ಮ ಸೈನ್ಯವು ಒಳನುಗ್ಗುವುದಕ್ಕೆ ಇದೇ ಅವಕಾಶವಲ್ಲವೇ? ರಹಸ್ಯಮಾರ್ಗವು ಯಾವುದು?"

**ಆಗಂತುಕ**—ಇದೇ ಸಮಯ ನಾನು ಈ ಮಧ್ಯಾಹ್ನದಲ್ಲಿ ನಿನ್ನೊಡನೆ ಯಾವ ಸ್ಥಳದಲ್ಲಿ ಸಂಭಾಷಣೆ ಮಾಡಿದೆನೊ ಆ ಸ್ಥಳದಿಂದ ಎಡಕ್ಕೆ ತಿರುಗಿದರೆ—

**ಮಾಲಿಕ್ ಕಾಫರ್**—"ಎಡಕ್ಕೆ ತಿರುಗಿದರೆ ಹಾಳುಗುಡಿಯೊಂದು ತೋರುವುದು."

**ಆಗುಂತುಕ**— "ಸರಿ, ಆ ಕಾಳಿಕಾ ದೇವಸ್ಥಾನಕ್ಕೆ ಇದಿರಾದ ಹಾದಿಯನ್ನು ಹಿಡಿದುಹೋದರೆ, ಅರಮನೆಯೆ ಹಿಂದುಗಡೆಯಲ್ಲಿ ಇಳಿಯಬಹುದು."

**ಮಾಲಿಕ್ ಕಾಫರ್**— "ಅಲ್ಲಿ ಸೈನ್ಯವೆಷ್ಟಿರುವುದು?"

ಅಷ್ಟರಲ್ಲಿ ಇಬ್ಬರೂ ಸುತ್ತುಮುತ್ತಲು ನೋಡಿದರು. ಯಾರೊಬ್ಬರ ಸುಳಿವು ತೋರುತ್ತಿರಲಿಲ್ಲ. ಗಾಳಿಯ ಶಬ್ದವೆಂದು ಸುಮ್ಮನಾದರು. ಪುನಃ ಕಣ್ಣೆತ್ತಿ ನೋಡಿದರು. ವಾಯುವಿನ ಹಿಲ್ಲೋಲದಿಂದ ಉಂಟಾದ ಎಲೆಗಳ ಮರಮರ ಶಬ್ದದಲ್ಲಿ ಅವರಿಗೆ ಏನೊಂದೂ ಕೇಳಿಸಲಿಲ್ಲ.

**ಆಗಂತುಕ**— "ಅಲ್ಲಿ ಬೇಕೆಂತಲೇ ಮೂವರು ಸಿಪಾಯರನ್ನು ಇಟ್ಟಿರುವೆನು."

**ಮಾಲಿಕ್ ಕಾಫರ್**— "ಅಲ್ಲಾವುದ್ದೀನರು ನೀನು ಮಾಡಿದ ಉಪಕಾರವನ್ನು ಮರೆಯಲಾರರು. ಯಾವ ಉಪಾಯದಿಂದಲಾದರೂ ಕೋಟೆಯನ್ನು ಜಯಿಸಿದ ಹೊರತು, ತಾನು ಅನ್ನಾಹಾರವನ್ನು ತೆಗೆದುಕೊಳ್ಳುವುದಿಲ್ಲ ಎಂದು ನಿನ್ನೆಯಿಂದ ಹಟಹಿಡಿದಿರುವರು. ರಾಮದೇವನ ಸ್ಥಾನವನ್ನು ನೀನೇ ಅಲಂಕರಿಸುವೆ ಎಂದು ತಿಳಿ."

**ಆಗಂತುಕ**— "ರಾಜನಾದ ಬಳಿಕ ನಾನು ವಿವಾಹನಾಗಬೇಕೆಂದು ಯೋಚಿಸಿರುವೆನು. ಅಲ್ಲಾವುದ್ದೀನನ ಸಮಕ್ಷಮದಲ್ಲಿಯೇ ನಾನು ವೀರಮತಿಯನ್ನು ವಿವಾಹವಾಗಬೇಕೆಂದು ನನ್ನ ಆಸೆ."

ಆಗ ಗಾಳಿಯು ಪುನಃ "ಚಿ! ಚಿ!" ಎಂಬ ಸ್ವರದಿಂದ ಬೀಸಿತು. ಒಂದೊಂದು ಹಕ್ಕಿಯು ಮರದಲ್ಲಿ ಗೂಡಿನಿಂದ "ಧಿಕ್! ಧಿಕ್!" ಎಂದು ಅರಚಿತು. ಮಾಲಿಕ್ ಕಾಫರನು ಆಗಂತುಕನ ಹಸ್ತವನ್ನು ಹಿಡಿದುಕೊಂಡು, "ಕೃಷ್ಣರಾಜ! ಇನ್ನು ಮುಂದೆ ನೀನೇ ದೇವಗಿರಿಯ ರಾಜನೆಂದು ತಿಳಿ. ನೀನು ಇಲ್ಲಿ ಡೇರೆಯಲ್ಲಿ ತಳುವಿದೆರೆ, ನಾನು ಅಲ್ಲಾವುದ್ದೀನರಿಗೆ ನಿನ್ನನು ಮನ್ನಣೆಗೊಳಿಸಬೇಕೆಂದು ಹೇಳುವೆನು. ವಿಳಂಬವಾದರೆ ಕಾರ್ಯವು ಕೆಟ್ಟುಹೋಗುವುದು. ಕುದುರೆಯನ್ನು ಹತ್ತಿ ನಾನು ಕೋಟೆಯನ್ನು

ಬೆಳಗಾಗುವಷ್ಟರಲ್ಲಿ ಒಳನುಗ್ಗಬೇಕು. ಇಕೋ ಕೋಳಿ ಕೂಗಿತು!” ಎಂದು ಹೇಳಿ ಕುದುರೆಯ ಮೇಲೆ ಹತ್ತಿ ಅದೃಶ್ಯನಾದನು.

ಆಗಂತುಕನು ಮನಸ್ಸಿನಲ್ಲಿ ಏನನ್ನೋ ಯೋಚಿಸುತ್ತ ಮಾಲಿಕನು ಇದ್ದ ಡೇರೆಯ ಕಡೆಗೆ ಮೆಲ್ಲಮೆಲ್ಲನೆ ಕಾಲಿಡುತ್ತಲಿದ್ದನು. ಅಷ್ಟರಲ್ಲಿ “ಹಾ! ದುಷ್ಟಾ” ಎಂಬೊಂದು ಸ್ತ್ರೀಧ್ವನಿಯು ಅವನ ಕಿವಿಯನ್ನೂ ಎದೆಯನ್ನೂ ಸೀಳಿಕೊಂಡು ಹೋಯಿತು. ಆಗಂತುಕನು ಪುನಃ ತಿರುಗಿದನು. ಕಣ್ಣು ಮುಚ್ಚುವಷ್ಟರಲ್ಲಿ ಮುಸುಕಿಟ್ಟು, ಒಂದು ವ್ಯಕ್ತಿಯು ಅವನ ಸಮ್ಮುಖಕ್ಕೆ ಹಾರಿಬಂದಿತು. ಆಗಂತುಕನು ತನ್ನ ಕಟಿಯಲ್ಲಿದ್ದ ಕಠಾರಿಯನ್ನು ಈಚೆಗೆ ಸೆಳೆಯುವಷ್ಟರಲ್ಲಿ ವ್ಯಕ್ತಿಯ ಕೈಯಲ್ಲಿದ್ದ ಭರ್ಚಿಯು ಅವನ ಹೊಟ್ಟೆಯನ್ನು ಹಾಯ್ದುಕೊಂಡು ಅವನ ಸೊಂಟದ ಕಠಾರಿಯನ್ನು ಝಣತ್ಕರಿಸಿತು. ಆಗಂತುಕನು ಘಾತವನ್ನು ತಡೆಯಲಾರದ, ನೆಲಕ್ಕೆ ಒರಗಿದನು.

ಕೃಷ್ಣರಾಜನು ಕರ್ಕಶವಾದ ಭೂಮಿಯ ಮೇಲೆ ಬಿದ್ದುಬಿಟ್ಟನು. ಅವನ ದೇಹದ ರಕ್ತದಿಂದ ನೆಲವೇ ಹರಿದುಹೋಗುವಂತಿತ್ತು. ಕೃಷ್ಣರಾಜನ ಪ್ರಾಣವು ಮೆಲ್ಲಮೆಲ್ಲನೆ ದೇಹವನ್ನು ಬಿಟ್ಟು ಹೋಗುತ್ತಿತ್ತು. ಅವನು ಅಸ್ಫುಟ ಸ್ವರದಿಂದ, “ಪ್ರಿಯೇ! ನನ್ನ ಹತ್ಯವನ್ನು ಮಾಡುವುದಕ್ಕೆಂದು ಇಲ್ಲಿಗೆ ಬಂದೆಯೇ?” ಎಂದು ಕೇಳಿದನು.

ವೀರಮತಿಯು ಉದ್ರೇಕಿತಳಾಗಿ “ಯಾವನು ಜನ್ಮಭೂಮಿಯ ಹತ್ಯವನ್ನು ಮಾಡುವನೋ ಅವನು ನಿನ್ನ ಗತಿಗೆ ಹೋಗಲಿ” ಎಂದಳು

**ಕೃಷ್ಣರಾಜ**—“ಸಖಿ! ವೀರಮತಿ! ನನ್ನನ್ನು! ನೀನು ಪ್ರೀತಿಸಲಿಲ್ಲವೇ?”

ವೀರಮತಿಯ ಉತ್ಸಾಹಿತವಾದ ಹೃದಯವು ಈ ಪ್ರಣಯಪ್ರಸ್ತಾಪದಿಂದ ಫಕ್ಕನೆ ಪರಿವರ್ತಿತವಾಯಿತು. ಕೃಷ್ಣರಾಜನ ಮಾಲಿಕ್ಕಾಫರರ ಗುಪ್ತ ಸಂಭಾಷಣದಿಂದ ಉದ್ರೇಕಿತವಾದ ಅವಳ ಸ್ವದೇಶಾನುರಾಗವು ಸರ್ವ ದೇಹವನ್ನು ಆವರಿಸಿಕೊಂಡು ಅವಳ ಹಸ್ತದಿಂದ ಈ ಘೋರಕೃತ್ಯವನ್ನು ಹೇಗೆ ನಡೆಯಿಸಿತೋ, ಹಾಗೆಯೇ ಆ

ಮನೋಭಾವವು ಶಾಂತವಾಗುತ್ತಲೇ ಪ್ರಾಣವಲ್ಲಭನ ಅಂತಿಮ ದರ್ಶನದಿಂದ ಅವಳ ಮನಸ್ಸನ್ನು ಆಕ್ರಮಿಸಿ, ತಾನೇ ತಾನಾಗಿ ನಿಂತ ಪ್ರಣಯಾವು ಅವಳನ್ನು ದುಃಖಕ್ಕೆ ಗುರಿಮಾಡಿತು. ಕೃಷ್ಣರಾಜನು ಉಜ್ವಲ ಮುಖದಿಂದ "ಪ್ರಾಣೇಶ್ವರೀ! ರಾಜ್ಯ— ಬೇಡ— ನಿನ್ನ—ಚುಂ—ಬ—ನ—ನಾನು—ಸಾ—ಯು" ಎಂದನು. ಅವನ ಕಡೆಯ ಮಾತುಗಳು ನಾಲಗೆಯಲ್ಲೇ ಉಳಿದುಹೋದುವು.

ವೀರಮತಿಯು ಆ ಮೃತದೇಹವನ್ನು ಚುಂಬಿಸಿದಳು; ಮತ್ತೊಮ್ಮೆ ಚುಂಬಿಸಿದಳು; ಪುನಃ ಚುಂಬಿಸಿದಳು. ಅಯ್ಯೋ! ವಿಧಾತೃನು ಈ ಸುಂದರವಾದ ದೇಹದಲ್ಲಿ ಕಪಟನನ್ನು ಏಕೆ ಅಡಗಿಸಿಟ್ಟನು? ಮಧುರ ಪುಷ್ಪದಲ್ಲಿ ಕ್ರಿಮಿ ಇರುವುದೆಂದು ಹೇಳುವರಲ್ಲವೆ? ಆದಕಾರಣದಿಂದಲೇ ಅದು ಸುಂದರ ಪುಷ್ಪವೆನಿಸುವುದೇ? ಪ್ರಿಯನೇ! ನಿನ್ನ ದೇಹವು ಚಂದ್ರನಂತೆ ಶೀತಲವಾಯಿತಲ್ಲಾ! ಚಂದ್ರನ ಕಳಂಕು ಗೋಚರವಾಗಿದೆ. ನಿನ್ನ ಕಳಂಕವನ್ನು ನೀನು ಮರೆಗೊಳಿಸಿ, ನನಗೆ ಈ ದುರ್ಗತಿಯನ್ನು ತಂದುಬಿಟ್ಟೆಯಲ್ಲ! ನಿನ್ನ ಸ್ಥಿತಿಯನ್ನು ನೋಡಲಾರದೆ "ಆಕಾಶದೀಪಗಳು" ಕಣ್ಮುಚ್ಚಿದುವು. ನನ್ನ ಕೈ ದೀಪವೇ! ನಿನ್ನ ಜೀವಜ್ಯೋತಿಯನ್ನು ನಾನು ನಂದಿಸಿದೆನಲ್ಲಾ! ಮರಳಿ ಇದನ್ನು ಹಚ್ಚುವುದಕ್ಕೆ ನಾನು ಬಲ್ಲೆನೆ? ಮುಸಲ್ಮಾನರಿಗೆ ಸಿಕ್ಕಿದರೇನು? ಸರಿ! ಇನ್ನು ವಿಳಂಬ ಮಾಡಲಾರೆನು. ನಿನ್ನನ್ನು ನಾನು ಬಿಟ್ಟಿರಲಾರೆನು. ಸರಿ! ಸರಿ! ಮುಸಲ್ಮಾನರು ಕೋಟೆ ನುಗ್ಗಿದರು!" ಹೀಗೆಂದು ಪ್ರಲಾಪಿಸುತ್ತಾ ವೀರಮತಿಯು ಪುನಃ "ನನ್ನ ಪ್ರಾಣವಲ್ಲಭನೇ! ಈ ಕಠಾರಿಯು ನಿನ್ನನ್ನು ಎಷ್ಟು ತಿವಿಯಿತೋ ನಾನು ಇದನ್ನು ನೋಡುವೆನು" ಎಂದು ಹೇಳಿ ಕಠಾರಿಯನ್ನು ಮೃತದೇಹದಿಂದ ಈಚೆಗೆ ಸೆಳೆದಳು. "ಶಿರಪುಷ್ಪವೇ! ನಿನ್ನನ್ನು ಇನ್ನೊಮ್ಮೆ ಆಘ್ರಾಣಿಸುವೆನು" ಎಂದು ಹೇಳಿ ಪುನಃ ಪುನಃ ಚುಂಬಿಸಿ "ಕೃಷ್ಣ! ಕೃಷ್ಣ! ಕೃಷ್ಣ!" ಎಂದು ಉಚ್ಚರಿಸುತ್ತ, ಕಠಾರಿಯ ಹತಿಯಿಂದ ಆಹತಳಾಗಿ ಕೃಷ್ಣರಾಜನ ದೇಹದ ಮೇಲೆ ಬಿದ್ದು ಪ್ರಾಣವನ್ನು ತೊರೆದಳು.

*****

ಇಲ್ಲಿ ಇನ್ನೂ ಹೇಳುವುದೇನೂ ಉಳಿಯಲಿಲ್ಲ. ಅಲ್ಲಾವುದ್ದೀನನು ಮಾಲಿಕ್ ಕಾಫರನ ಮುಖಾಂತರವಾಗಿ ಮಾಡಿದ ಭೇದೋಪಾಯವು ಫಲಿಸಿತು. ದೇವಗಿರಿಯ ದುರ್ಗವು ಅಲ್ಲಾವುದ್ದೀನನ ವಶವಾಯಿತು. ಮಿಕ್ಕ ಅಂಶವೆಲ್ಲಾ ಹಿಂದೂಸ್ಥಾನದ ಇತಿಹಾಸದಲ್ಲಿ ವಿಸ್ತರಿತವಾಗಿದೆ.

# ಶೈಲಿನಿ

ಚಂದ್ರನು ಗಗನಾಂಗಣದಲ್ಲಿ ಮೆಲ್ಲಮೆಲ್ಲನೆ ಸಂಚರಿಸುತ್ತಿದ್ದನು; ಒಮ್ಮೆ ಸಾಂದ್ರವಾಗಿದ್ದ ಮೋಡಗಳ ಮರೆಯಲ್ಲಿ ಹುದುಗಿ, ಒಮ್ಮೆ ಮುಗಿಲ್ದೆರೆಯನ್ನು ತೆರೆದು, ತನ್ನ ಮುಖವನ್ನು ತೋರಿಸುತ್ತ ಸಂಚರಿಸುತ್ತಿದ್ದನು. ಸ್ನಿಗ್ಧವಾದ ಚಂದ್ರಿಕೆಯು ಡಿಲ್ಲಿಯ ಪುರಾತನ ಕೋಟೆಯ ಹಾಳುಕೊಂಪೆಯ ಮೇಲೆ ಬಿದ್ದು ನಗುತ್ತಲಿತ್ತು; ನವೀನ ದುರ್ಗದ ಪ್ರಾಕಾರಗಳು ಶ್ವೇತಶಿಲೆಯಿಂದ ನಿರ್ಮಿತವಾದಂತೆ ಕಂಗೊಳಿಸುತ್ತಲಿದ್ದುವು. ನಗರೋಪ ಕಂಠದಲ್ಲಿದ್ದ ರಾಜಪುತ್ರರ ಮಂದಿರಗಳೂ ಮನಸಬ್ದಾರರ ಮಹಲುಗಳೂ ಇನ್ನು ಶುಭ್ರವಾಗಿ ರಂಜಿಸುತ್ತಲಿದ್ದುವು. ಸಮೀಪದಲ್ಲಿ ಯಮುನಾನದಿಯು ಮಂಜುಘೋಷಿಣಿಯಾಗಿ ಪ್ರವಹಿಸುತಲಿತ್ತು. ತರಂಗಹಿಲ್ಲೋಲದಿಂದ ನದಿಯಲ್ಲಿ ಚಂದ್ರನು ಸಹಸ್ರಬಿಂಬನಾಗಿ ಬೆಳಗುತಿದ್ದನು. ಒಂದೆರಡು ದೋಣಿಗಳು ನದಿಯ ಮೇಲೆ ಕ್ರೀಡಿಸುತ್ತಲಿದ್ದುವು. ನದಿಯ ದಡದಲ್ಲಿ ಮನುಷ್ಯ ಸಂಚಾರವಿರಲಿಲ್ಲ. ತರುಣನೊಬ್ಬನು ನದಿಯ ತೀರವನ್ನು ಬಿಟ್ಟು ರಾಜಮಾರ್ಗವಾಗಿ ಹೋಗುತ್ತಿದ್ದನು. ತರುಣನು ಒಮ್ಮೆ ಮೆಲ್ಲಮೆಲ್ಲನೆ ಕಾಲಿಡುತ್ತ, ಒಮ್ಮೆ ಬೇಗಬೇಗನೆ ನಡೆಯುತ್ತಿದ್ದನು. ಮಂದವಾದ ಯಮುನಾಜಲದಲ್ಲಿ ಪ್ರತಿಬಿಂಬಿತವಾದ ಚಂದ್ರನ ಸೌಂದರ್ಯವನ್ನು ವಿನಂದಿಸುವುದಕ್ಕೆ ನಿಲ್ಲದೆ, ಯುವಕನು ರಾಜಮಾರ್ಗವಾಗಿ ಹೋಗುತ್ತಿದ್ದನು. ಅಲ್ಲಲ್ಲಿ ಮನೆಗಳ ಮಹಡಿಗಳನ್ನು ನೋಡುತ್ತ ಮುಂದರಿಸುತ್ತಿದ್ದನು. ತರುಣನು ಯಾರೆಂದು ಸ್ಪಷ್ಟವಾಗಿ ತೋರುತ್ತಿರಲಿಲ್ಲ. ಆಕಾರದಲ್ಲಿ ಕುಳ್ಳನು, ಆಜಾನುಬಾಹುವು; ದೇಹದಲ್ಲಿ ಬಲಾಢ್ಯನು; ದೃಢಕಾಯನು; ಅವನ ನಡಿಗೆಯು ರಾಜಗಮನದಂತಿರಲಿಲ್ಲ. ಹೆಜ್ಜೆಯನ್ನು ದೂರವಿಡುತ್ತ ಯುವಕನು ರಾಜಮಾರ್ಗದ ಕೊನೆಯ ತನಕ ಏಕಾಕಿಯಾಗಿ ಹೋದನು. ಹಠಾತ್ತಾಗಿ ಒಂದು ನಿಮಿಷ ಮಾರ್ಗದ ಮೇಲೆ ತಳುವಿದನು. ಚಂದ್ರನು ಅಸ್ತಮಿಸುವಂತಿದ್ದನು. ಎಲ್ಲಿಂದಲೋ ಮಧುರವಾದ ಸ್ವರವು ವಾಯುತರಂಗಗಳಲ್ಲಿ

ತೇಲಿ ಬರುತ್ತಲಿತ್ತು. ಸ್ವರವು ಎಲ್ಲಿಂದ ಬರುವುದೆಂದು ನೋಡುವುದಕ್ಕೆ ತರುಣನು ಕುತೂಹಲಚಿತ್ತನಾಗಿ ಹಿಂದುಮುಂದು ನೋಡಿದನು. ಒಡನೆ ಒಂದು ಮಂದಿರದ ಉಪ್ಪರಿಗೆಯಿಂದ ಸ್ವರವು ಬೀಸುತ್ತಿರುವುದೆಂದು ಬೋಧೆಯಾಗಿ, ಯುವಾನನು ಮಂದಿರದ ಕೆಳಗೆ ಬಂದು ನಿಂತನು. ಹೃದಯಂಗಮವಾದ ಗೀತಸ್ವರವು ಫಕ್ಕನೆ ಸ್ತಬ್ಧವಾಯಿತು. ಅಧ್ವಗನು ಮಾರ್ಗದ ಮೇಲೆ ನಿಲ್ಲುವುದು ಸರಿಯಲ್ಲವೆಂದು ಬಗೆದು ಮಹಲಿನ ಬಲಗಡೆಯಲ್ಲಿ ಬೆಳೆದಿದ್ದ ಮರದ ಹಿಂದುಗಡೆಯಲ್ಲಿ ಸರಿದು ನಿಂತನು. ಮರದ ಟೊಂಗೆಯೊಂದು ಉಪ್ಪರಿಗೆಯ ಗೋಡೆಯವರೆಗೆ ವಿಸ್ತರಿಸಿತ್ತು. ಹಾಡು ಉಪ್ಪರಿಗೆಯಿಂದ ಪುನಃ ಕೇಳಿಸಿತು.

ಇಚ್ಛಿತ ವರನನು | ತುಚ್ಛೀಕರಿಸುತ

ಮ್ಲೇಚ್ಛನ ವರಿಸೆಂದು | ಉಚ್ಚರಿಪನೆ ತಂದೆ. ||

ಯುವಾಪುರುಷನು ಕ್ಷುಧಿತನಯನನಾಗಿ ಕಾಲಬೆರಳ ಮೇಲೆ ನಿಂತು ತನ್ನ ಕೊರಳನ್ನು ನಿಲ್ಕಿ ನೋಡಿದನು. ಯಾರ ಮುಖವೂ ಅವನ ದೃಷ್ಟಿಪಥದಲ್ಲಿ ತೋರಲಿಲ್ಲವೆಂದು ಚಿಂತಿಸಿ, ಯುವಕನು ಪಕ್ಕದಲ್ಲಿದ್ದ ಮರವನ್ನು ಹತ್ತಿದನು. ಗೀತದ ಮುಂದಿನ ಮಾತುಗಳು ಸರಿಯಾಗಿ ಕೇಳಿಸುತ್ತಲಿದ್ದುವು.

ಎಲ್ಲವ ತೊರೆವೆನು | ನಲ್ಲನ ಸೇರ್ವೆನು

ಕಲ್ಲಿನ ಕಾಡೊಳು | ನಿಲ್ಲದೆ ಪೋಗುವೆ. ||

ಯುವಕನು ಟೊಂಗೆಯನ್ನು ಹತ್ತಿ, ತೆರೆದಿದ್ದ ಕಿಟಕಿಯ ಇದಿರಾಗಿ ತನ್ನ ಮುಖವನ್ನು ಇಟ್ಟು ಇಣಿಕಿ ನೋಡಿದನು. ಉಪ್ಪರಿಗೆಯ ಕೊಟ್ಟಡಿಯಲ್ಲಿ ದೀಪವೊಂದು ಉರಿಯುತ್ತಲಿತ್ತು. ಅದರ ಬಳಿಯಲ್ಲಿ ಮತ್ತೊಂದು ದೀಪವು ಪ್ರಜ್ವಲಿಸುತ್ತಲಿತ್ತು. ಅನಂಗರಂಗಮಯವಾದ ಅಂಗನಾರತ್ನ ಪ್ರದೀಪ.

ಯುವಕನು ಸದ್ದಾಗದಂತೆ ಮರದ ರೆಂಬೆಯಲ್ಲಿ ಅವಿತುಕೊಂಡು ಕಣ್ಣಿಟ್ಟು ನೋಡಿದನು. ರಮಣಿಯ ಹಾಡು ತೀರಿತು. ಕಾಮಿನಿಯು ಚಿಂತಾಕುಲಿತಳಾದಂತೆ ಪರ್ಯಂಕದ ಮೇಲೆ ಒರಗಿದ್ದಳು. ಅವಳ ಅವಕುಂಠರಹಿತವಾದ ಮುಖವು ಬಿಳ್ಚೇರಿ ಹೋಗಿತ್ತು. ನೆನೆದ ಕನ್ನಡಿಯಂತೆ ತೋರುವ ಕಪೋಲವೊಂದು ಕೈದಳವನ್ನು ಆಧರಿಸಿತ್ತು. ಸ್ವಪ್ನ ಸಾಮ್ರಾಜ್ಯದ ಸುಖವನ್ನು ಅನುಭವಿಸುವಂತೆ ಅಧರಗಳಲ್ಲಿ ಮಂದಸ್ಮಿತವು ಅಡಗಿತ್ತು. ಹೊಳೆಹೊಳೆವ ಸೀರೆಯ ಅಂಚಲವು ವಕ್ಷೋಭಾಗದಿಂದ ಮೆಲ್ಲಮೆಲ್ಲನೆ ಓಸರಿಸುತ್ತಲಿತ್ತು. ಅವಳ ಅರ್ಧೋನ್ಮೀಲಿತವಾದ ನಯನಗಳ ಕಾಂತಿಯನ್ನು ಕಳುವುದಕ್ಕೆ ದೀಪದ ಕುಡಿಯು ಸಡಗರಿಸುತ್ತಲಿತ್ತು. ದೀಪದ ಅಡಿಯಲ್ಲಿ ಪುಸ್ತಕವೊಂದು ಅರೆತೆರೆದಿತ್ತು. ರಮಣಿಯ ರೂಪಲಾವಣ್ಯಗಳೇನೂ ಅಷ್ಟು ಅಸಾಧಾರಣವಾಗಿರಲಿಲ್ಲ. ಆದರೆ ಅವಳ ಮುಖದಲ್ಲಿಯೂ ಮೈಯಲ್ಲಿಯೂ ಒಂದು ಪ್ರಾಕಾರವಾದ ಚಿತ್ತಾಕರ್ಷಕವಾದ ಸೌಂದರ್ಯವು ಕವಿದಿತ್ತು. ಇವಳಿಗಿಂತಲೂ ರೂಪವತಿಯವರಾದ ಸ್ತ್ರೀಯರು ಎಷ್ಟೋ ನೋಡಸಿಕ್ಕುವರು. ಈ ಮುಖದಲ್ಲಿದ್ದ ಮಾಧುರ್ಯವೂ ಮೋಹನಶಕ್ತಿಯೂ ನೋಡಸಿಕ್ಕದು. ಪ್ರಥಮದೃಷ್ಟಿಗೆ ಅವಳ ಮುಖವು ಮನಸ್ಸಿನಲ್ಲಿ ಕನಿಕರವನ್ನೂ ದುಃಖವನ್ನೂ ಉಂಟುಮಾಡುವುದು. ಮುಖವನ್ನು ದರ್ಶಿಸಿದಷ್ಟಕ್ಕೆ ಅಂತರ್ಯದಲ್ಲಿದ್ದ ಕೋಮಲಭಾವವು ಪರಿಸ್ಫುಟವಾಗಿ ನೋಟಕನ ಕಣ್ಮನವನ್ನು ಸೆಳೆದುಬಿಡುವುದು. ಎಷ್ಟು ನೋಡಿದರೂ ಮನಸ್ಸು ತೃಪ್ತಿಗೊಳ್ಳದು, ಶಾಂತವಾಗದು. ಅವಳ ಪ್ರಥಮದರ್ಶನದಿಂದ ನೋಟಕನ ಮನಸ್ಸಿನಲ್ಲಿ ಉಂಟಾಗುವ ಸಂತೋಷವು ಪರಕ್ಷಣದಲ್ಲಿಯೇ ಅಲ್ಲಲ್ಲಿ ತೋರಿತೋರದ ವ್ಯಸನಬಿಂದುಗಳಿಂದ ಹೆಪ್ಪುಗಟ್ಟಿ ಹೋಗುತ್ತಲಿತ್ತು. ವೈಶಾಖ ಸೂರ್ಯನ ಆತಸದಿಂದ ಕಂದಿದ ಕುಂದಿದ ಕೋಮಲವಾದ ಬಳ್ಳಿಯೂ ದವಾನಲದ ಉಷ್ಣಸ್ಪರ್ಶದಿಂದ ಬಾಡಿ ಬಸವಳಿದ ಕರ್ಣಿಕಾರ ಪುಷ್ಪವೂ ಯಾವ ಪ್ರಕಾರದಲ್ಲಿ ವಿಷಾದ ವಿನೋದಗಳನ್ನು ಮನಸ್ಸಿನಲ್ಲಿ ಒಂದೇ ಸಲ ಉಂಟುಮಾಡುವುವೋ ಆ ಭಾವವನ್ನೇ ಈ ಸುಂದರಿಯ ದರ್ಶನವು ಪ್ರೇಕ್ಷಕರ ಹೃದಯದಲ್ಲಿ ಉಂಟುಮಾಡುತ್ತಲಿತ್ತು.

ಯುವಕನು ದೀಪದ ಜ್ಯೋತಿಯಿಂದ ಇನ್ನೂ ಉಜ್ವಲವಾಗಿ ತೋರುವ ಮುಖವನ್ನು ಸ್ವಲ್ಪ ಹೊತ್ತು ದೃಷ್ಟಿಸುತ್ತ ತನ್ನ ತುಟಿಯೊಳಗೆನೇ ಏನನ್ನೋ ಅನ್ನುತ್ತಿದ್ದನು. ಫಕ್ಕ "ಶೈಲಿನಿ" ಎಂಬ ಮಾತು ಅವನ ಬಾಯಿಂದ ಎಚ್ಚರವಿಲ್ಲದೆ ಕೆಳಕ್ಕೆ ಬಿದ್ದಿತು. ನಿಶ್ಶಬ್ದವಾದ ಕೊಟ್ಟಡಿಯೊಳಗೆ ಶೈಲಿನಿ ಎಂಬ ಪದವು ಪ್ರತಿಧ್ವನಿತವಾಯಿತು. ವೃಕ್ಷಾರೋಹಿಯು ಏನೆಂದನೆಂದು ಅರಿಯದೆ ಅಳುಕಿದನು. ಪುನಃ ಯುವಾಪುರಷನು "ಶೈಲಿನಿ!" ಎಂದು ಕೂಗಿ ಕರೆದನು. ಒಡನೆ ರಮಣಿಯು ಎಚ್ಚರವಾದಂತೆ ಕಣ್ದೆರಸಿ, ತನ್ನನ್ನು ಯಾರೋ ಕೂಗಿ ಕರೆಯುವರೆಂದು ಎಂದು ಎಣಿಸಿ ಸುತ್ತಲೂ ನೋಡಿದಳು. ಕಿಟಕಿಯ ಕಡೆಯಿಂದ ಶೈಲಿನಿ ಎಂಬ ಸ್ವರವು ಮತ್ತೊಮ್ಮೆ ಕೇಳಿಸಿತು. ಯುವತಿಯು ಸಂತೋಷಚಿತ್ತಳಾಗಿ ತನ್ನ ಸೀರೆಯ ಸೆರಗನ್ನು ಸರಿಗೊಳಿಸುತ್ತ, ಗವಾಕ್ಷದ ಕಡೆಗೆ ಹೆಜ್ಜೆಯನ್ನಿಟ್ಟಳು. ನಿದ್ರಾಭಂಗದಿಂದರೊ ಭಯದಿಂದಲೋ ಆಯಾಸದಿಂದಲೊ ತರುಣಿಯ ಕಾಲು ತಡವರಿಸುತ್ತಲಿತ್ತು. ಅವಳು ತನ್ನ ಇದಿರಾಗಿ ಬರುವುದನ್ನು ನೋಡಿ ವೃಕ್ಷಾರೋಹಿಯು "ಶೈಲಿನಿ"! ದಾರಿಗನೊಬ್ಬನು ಇರುಳೆಲ್ಲಾ—

ಶೈಲಿನಿಯು ಕೈಸನ್ನೆ ಮಾಡುವುದನ್ನು ನೋಡಿ ಯುವಕನ ಮಾತು ಮುಂದುವರಿಸಲಿಲ್ಲ. ಅವಳು ಗವಾಕ್ಷದ ಬಳಿಗೆ ಬಂದು ಮುಖವನ್ನು ಹೊರಚಾಚಿ "ನೀನು ಇಷ್ಟು ಸಾಹಸವನ್ನು ಏಕೆ ಮಾಡಿದೆ?" ಎಂದು ಕೇಳಿದಳು.

**ಯುವಕ**:— "ನಿನಗೋಸ್ಕರ."

**ಶೈಲಿನಿ**:—"ನನಗೋಸ್ಕರ ನೀನು ಅಪಾಯಕ್ಕೆ ಗುರಿಯಾಗಬೇಕೆಂದು ನಾನು ಬಯಸುವುದಿಲ್ಲ."

**ಯುವಕ**:— "ಅಪಾಯಕ್ಕೆ ಈ ಮರಾಟನು ಹೆದರುವನೇ? ನನಗೆ ಅಪಾಯ ಬರುವುದು ಯಾರಿಂದ? ನಿನ್ನ ತಂದೆಯಿಂದಲೇ?"

ಶೈಲಿನಿಯು ಮನಗುಂದಿದವಳಾಗಿ, "ಅಪಾಯವು ಯಾರಿಂದಲಾದರೂ ಬರಬಹುದು. ನಿಶೆಯಲ್ಲಿ ಈ ಎತ್ತರವಾದ ಮರವನ್ನು ನೀನು ಹೇಗೆ ಹೆತ್ತಿದೆ?"

**ಯುವಕ**:—"ಕಾಮದೇವನೇ ನನ್ನ ಬೆಂಬಲಕ್ಕೆ ಇದ್ದನು. ಅಂದು ನೀನು ಪ್ರತಾಪಗಡದಲ್ಲಿ ಅರಮನೆಯ ಗೋಡೆಯನ್ನು ಹೇಗೆ ಏರಿ ಬಂದೆ?"

ಶೈಲಿನಿಯು ಒಮ್ಮೆ ಮಾತನಾಡಲಿಲ್ಲ, ಬಳಿಕ "ಅದು ಹೋಗಲಿ, ಈಗ ನೀನು ಬಂದುದು ಅನುಚಿತವಾಯಿತು" ಎಂದಳು.

**ಯುವಕ**:— "ಹೇಗೆ ಅನುಚಿತವಾಯಿತು?"

**ಶೈಲಿನಿ**:—"ನನ್ನ ತಂದೆಯು ನನ್ನೊಡನೆ ಮಾತನಾಡುವುದಕ್ಕೆ ಈಗಲೇ ಇಲ್ಲಿಗೆ ಬರುತ್ತಿರುವನು. ನಿನ್ನನ್ನು ನೋಡಿಬಿಟ್ಟರೆ, ನಮ್ಮ ಅವಸ್ಥೆ ಏನಾಗುವುದೋ ಎಂದು ಭಯವಾಗುತ್ತಿದೆ."

**ಯುವಕ**:— "ರಜಪೂತ ಸ್ತ್ರೀಯು ಮರಣಕ್ಕೆ ಭೀತಳಾಗುವಳೇ? ಸಖೀ! ಶೈಲಿನಿ! ನಾನು ಮರಣಕ್ಕೆ ಸಿದ್ದನಾಗಿರುವೆನು, ಆದರೆ ಸಾಯುವ ಮೊದಲು ನಿನ್ನೊಡನೆ ಎರಡು ಮಾತುಗಳನ್ನು ಕೇಳಬೇಕೆಂದಿರುವೆನು."

ಯುವಕನು ಕಾಂಕ್ಷಿತಸ್ವರವನ್ನು ಕೇಳಿ ಶೈಲಿನಿಯು ಏನೋ ಯೋಚಿಸುತ್ತ ನಿಂತುಬಿಟ್ಟಳು. ತಂದೆಯು ತನ್ನನ್ನು ನೋಡಲು ಬರುವ ಸಮಯವು ಸಮೀಪಿಸಿತೆಂದು ತಿಳಿದು ಕಾತರಳಾದಳು. ಯುವಕನೊಡನೆ ಪ್ರಣಯ ಸಲ್ಲಾಪಕ್ಕೆ ಸಮಯವು ಅನುಚಿತವಾಯಿತೆಂದು ಕಾತರಳಾದಳು. ತಂದೆಯು ಇದುವರೆಗೆ ತನ್ನನ್ನು ನೋಡಲು ಬಾರದೆ ಇದ್ದುದರಿಂದ, ಇನ್ನೂ ಮೇಲೆ ಬರಲಾರನೆಂದು ಒಮ್ಮೆ ನಿಶ್ವೈಸಿ ಶೈಲಿನಿಯು ಯುವಕನನ್ನು ಒಳಕ್ಕೆ ಬರುವಂತೆ ಕೈಸನ್ನೆ ಮಾಡಿದಳು. ಒಡನೆ ಶಿರೀಶಪುಷ್ಪ ಸದೃಶವಾದ ತನ್ನ ಹಸ್ತವನ್ನು ಹೊರನೀಡಿದಳು. ಯುವಕನು ಪಾಣಿಗ್ರಹಣ ಮಾಡಿ ಕೃತಕೃತ್ಯನಾದನು.

ಯುವಕನು ಶೈಲಿನಿಯ ಕೈಯನ್ನು ಬಿಗಿಹಿಡಿದು “ಪ್ರಿಯೆ ! ನನ್ನನ್ನು ಪ್ರೀತಿಸುವೆಯಾ?” ಎಂದು ಕೇಳಿದನು.

ಶೈಲಿನಿಯು ಎಲ್ಲಿಯೋ ಕಿವಿಗೊಟ್ಟಂತೆ ನೋಡುತ್ತ ಅಪ್ರತಿಭಳಾಗಿ ನಿಂತುಬಿಟ್ಟಳು.

**ಯುವಕ**:—“ಶೈಲಿನಿ! ನಿನ್ನ ಇಚ್ಛಿತ ವರನು ಯಾರು? ನಿನ್ನ ತಂದೆಯು ಯಾರನ್ನು ತುಚ್ಛೀಕರಿಸುವನು? ನನ್ನನ್ನೇ?”

ಶೈಲಿನಿಯು ಏನು ಹೇಳಬೇಕೆಂದು ತಿಳಿಯಲಾರದೆ ಹೋದಳು. ಕೂಡಲೇ “ಶೈಲಿ! ಶೈಲಿ!” ಎಂದು ಕೆಳಗಿನಿಂದ ಯಾರೋ ಕೂಗಿ ಕರೆಯುವುದು ಕೇಳಿಸಿತು. ಶೈಲಿನಿಯು ಯುವಕನು ಕರಪಾಶದಿಂದ ಸಡಿಲಿಸುವುದಕ್ಕೆ ತವಕಗೊಂಡು, ಕೈಯನ್ನು ಹಿಂದೆ ಸೆಳೆದುಬಿಟ್ಟಳು. “ನನ್ನ ತಂದೆಯು ಈಗಲೇ ಮೇಲೆ ಬರುವನು. ಇನ್ನು ನಿಲ್ಲಬೇಡ” ಎಂದಳು. ಯುವಕನು “ತಂದೆ ಹೀನಿಸುವುದು ನನ್ನನ್ನೇ?” ಎಂದು ಪುನಃ ಕೇಳಿದನು.

ಮಹಡಿಯ ಮೆಟ್ಟಲು ಹತ್ತಿ ಯಾರೋ ಬರುವ ಸದ್ದು ಕೇಳಿಸಿತು. ಶೈಲಿನಿಯು ಯುವಕನೊಡ ಮೆಲ್ಲನೆ ಏನನ್ನೋ ಹೇಳಿಬಿಟ್ಟಳು. “ನವಮಿ.... ರಾತ್ರಿ....ಶಿಬಿರದ....ಬಳಿಯಲ್ಲಿ” ಎಂಬ ಮೊದಲಿನ ಶಬ್ದಗಳು ಮಾತ್ರ ಯುವಕನ ಕಿವಿಯಲ್ಲಿ ಇಳಿದುವು. ಯುವಕನು ಮನಸ್ಸಿನಲ್ಲಿ ಸಂಪೂರ್ಣವಾದ ಅರ್ಥವನ್ನು ಮಾಡಿ, ವೃಕ್ಷದಿಂದ ಕೆಳಕ್ಕೆ ಇಳಿಯಲು ಸಿದ್ಧನಾದನು. ಪುನಃ ಶೈಲಿನಿಯ ಪ್ರಫುಲ್ಲಿತವಾದ ಮುಖಸಂದರ್ಶನವನ್ನು ಮಾಡಲೆಳಸಿ, “ನನ್ನನ್ನೇ” ಎಂದು ಒತ್ತಿಕೇಳಿದನು.

ಶೈಲಿನಿಯು ಮನಸ್ಸಿನಲ್ಲಿಯೇ “ವರಿಸುವೆನು” ಎಂದು ಅಂದುಕೊಂಡಳು. ತತ್‌ಕ್ಷಣದಲ್ಲಿ ಉಪ್ಪರಿಗೆಯ ಬಾಗಿಲನ್ನು ತೆರೆದು ಯಾರೋ ಒಬ್ಬನು ಒಳಕ್ಕೆ ಬಂದನು. ಬಂದವನು ಶೈಲಿನಿಯ ತಂದೆ; ರಾಠೋರ್ ಸಂಸ್ಥಾನದ ರಾಜನಾದ ರಾಜಸಿಂಹನು.

ಈ ಕಥಾಕಾಲದಲ್ಲಿ ಅವರಂಗಜೀಬನು ಢಿಲ್ಲಿಯ ಸಮ್ರಾಟನಾಗಿದ್ದನು. “ಅವರಂಗಜೀಬನ ಕಠೋರ ಶಾಸನದಿಂದ ಭಾರತವರ್ಷದಲ್ಲಿ ಸರ್ವತ್ರ ಭೀತಿಯೂ ಆತಂಕವೂ ಪಸರಿಸಿದ್ದವು.” ಅವನ ಕ್ರೂರವಾದ ಅಧಿಕಾರ ಜಂಝೂನಿಲನಿಂದ ಪ್ರಚಲಿತವಾದ ಭಾರತಸಾಗರದ ಜಲದಲ್ಲಿ ರಾಜಪುತ್ರರ ಸ್ವಾತಂತ್ರ್ಯವು ಮುಳುಗಿ ಹೋಗುತ್ತಲಿತ್ತು. ಸ್ವಾಧೀನತೆಯ ಪ್ರಧಾನಭಕ್ತನಾದ, ಅಂಬರಸಂಸ್ಥಾನದ ಅಧಿಪತಿಯಾದ ಜಯಸಿಂಹನು ಢಿಲ್ಲಿಯ ಸಿಂಹಾಸನದ ಬಳಿಯಲ್ಲಿ ಬದ್ಧಹಸ್ತನಾಗಿ ನಿಲ್ಲಲು ಒಡಂಬಟ್ಟನು! ಮಾರವಾಡದ ಯಶವಂತಸಿಂಹನಿಗೂ ರಾಠೋರದ ರಾಜಸಿಂಹನಿಗೂ ಭೇದವನ್ನು ತಂದಿಕ್ಕಿ, ಇಬ್ಬರನ್ನೂ ಅವರಂಗಜೀಬನು ತನ್ನ ಸಿಂಹಾಸನಕ್ಕೆ ಅಲಂಕಾರಳಲಶಗಳನ್ನಾಗಿ ಮಾಡಿದನು. ಉತ್ತರ ಹಿಂದುಸ್ಥಾನದಲ್ಲಿ ಸಿಕ್ ಜನರು ತಮ್ಮನ್ನು ಬಂಧಿಸಿದ ಶೃಂಖಲಗಳನ್ನು ಕಳಚುವುದಕ್ಕೆ ಹುರಿದುಂಬಿ ಒಟ್ಟುಗೂಡುತ್ತಲಿದ್ದರು. ದಖ್ಖಣದಲ್ಲಿ ಸ್ವತಂತ್ರವಾಗಿದ್ದ ಗೊಲ್ಕೊಂಡ ಮತ್ತು ಬಿಜಾಪುರ ಸಂಸ್ಥಾನಗಳು ಕ್ಷೀಣವಾಗಿ ಅಸ್ತಮಿಸುವಂತಿದ್ದುವು. ಲೋಕೈಕವೀರನಾದ ಶಿವಾಜಿಯು, ಮಹಾರಾಷ್ಟ್ರ ಸಾಮ್ರಾಜ್ಯವನ್ನು ಕಟ್ಟುವುದಕ್ಕೆ ಹಿಂದುಗಳನ್ನು ಏಕತ್ರವಾಗಿ ಮಾಡಲು ಪ್ರಯತ್ನಿಸುತ್ತಿದ್ದನು. ಅವನ ಪ್ರಯತ್ನಗಳಿಂದ ಮೊಗಲ ಸಾಮ್ರಾಜ್ಯದ ಕೀಲು ಸಡಿಲಾಗುತ್ತಾ ಬಂದಿತು. ಭೂಕಂಪನದಿಂದ ಸಂಕ್ಷೋಭಿಕವಾದ ಸಮುದ್ರದ ಅಂತಸ್ಥಲದಿಂದ ನವೀನ ದ್ವೀಪಗಳ ಶಿರ್ಷೋದಯವಾಗುವಂತೆ, ಶಿವಾಜಿಯ ದೋರ್ದಂಡಪ್ರತಾಪದಿಂದ ಪ್ರಾಚೀನ ಹಿಂದೂರಾಜ್ಯಗಳ ಭಗ್ನಾವಶೇಷದ ಮೇಲಿಂದ ಮಹಾರಾಷ್ಟ್ರ ರಾಜ್ಯವು ತಲೆಯೆತ್ತುತ್ತಲಿತ್ತು. ಶೈಶವದಲ್ಲಿಯೇ ಅದರ ಗೋಣು ಮುರಿದು ಬಿಡುವುದಕ್ಕೆ ಅವರಂಗಜೀಬನು ಪೇಚಾಡಿದನು. ಅವರಂಗಜೀಬನ ಪೇಚಾಟವು ಬಯಲಾಯಿತು. ಆಪತ್ತುವಿಪತ್ತುಗಳೇ ಶಿವಾಜಿಯ ಸಾಹಸಶೌರ್ಯಗಳಿಗೆ ಸಾಣೆಯ ಕಲ್ಲಾದುವು. ಕಷ್ಟಸಂಕಷ್ಟಗಳು ತಗಲಿದಷ್ಟಕ್ಕೆ ಮಹಾರಾಷ್ಟ್ರ ರಾಜ್ಯವು ಬಲವಾಗುತ್ತ, ಬೇರೂರುಕ್ತ ಹೋಯಿತು. ಶಿವಾಜಿಯು ಮಕ್ಕಾವಿಗೆ ಹೋಗುವ ಮುಸಲ್ಮಾನ ಯಾತ್ರಿಕರನ್ನು ಸೂರೆಗೊಂಡನು. ಉರಿಯುವ ಗಡ್ಡದ ಇದಿರಿಗೆ ಹುಕ್ಕ

ಹಿಡಿದಂತಾಯಿತು. ಕೋಪಾಕುಲಿತನಾದ ಅವರಂಗಜೇಬನು "ಪರ್ವತಮೂಷಕ"ವನ್ನು ಹಿಡಿಯುವುದಕ್ಕೆ ಮಹಾಸೇನೆಯೊಡನೆ ಜಯಸಿಂಹನನ್ನೂ ದಿಲೇರಿಖಾನನನ್ನೂ ದಕ್ಷಿಣ ಹಿಂದುಸ್ಥಾನಕ್ಕೆ ಕಳುಹಿಸಿದನು. ಪುರಂದರ ದುರ್ಗದಲ್ಲಿ ಮರಾಟರಿಗೂ ಮೊಗಲರಿಗೂ ಘೋರ ಯುದ್ಧ ನಡೆಯಿತು. ದೀರ್ಘದರ್ಶಿಯಾದ ಶಿವಾಜಿಯು ಏನೋ ಒಂದು ವಿಶೇಷ ಕಾರಣದಿಂದ ಮೊಗಲ್ ಸಮ್ರಾಟನೊಡನೆ ಸಂಧಿಮಾಡಿಕೊಳ್ಳುವುದು ಕ್ಷೇಮಕರವೆಂದು ಎಣಿಸಿ, ಜಯಸಿಂಹನಿಗೆ ಶರಣಾಗತನಾದನು. ಈ ಸಂಧಿಯ ಪ್ರಕಾರ ಅವರಂಗಜೇಬನು ಶಿವಾಜಿಗೆ ಡಿಲ್ಲಿಗೆ ಬರಬೇಕಾಗಿ ಆಹ್ವಾನಪತ್ರವನ್ನು ಬರೆದನು. ಶಿವಾಜಿಯು ತನ್ನ ಆಪ್ತರನ್ನೂ ಅಧಿಕಾರಿಗಳನ್ನೂ ೧,೦೦೦ ಮಂದಿ ಮಾವಳಿಗಳನ್ನೂ ೩,೦೦೦ ಮಂದಿ ರಾವುತರನ್ನೂ ಕೂಡಿಕೊಂಡು ತನ್ನ ಜ್ಯೇಷ್ಠಪುತ್ರನಾದ ಶಂಭಾಜಿಯೊಡನೆ ಮಹಾಸಂಭ್ರಮದಿಂದ ಢಿಲ್ಲಿಗೆ ಬಂದಿಳಿದಿದ್ದನು.

ಶಿವಾಜಿಯನ್ನು ಇದಿರುಗೊಳ್ಳುವುದಕ್ಕೆ ಅವರಂಗಜೇಬನು ಸ್ವತಃ ಹೋಗಲಿಲ್ಲ. ಅವನು ಜಯಸಿಂಹನ ಮಗನಾದ ರಾಮಸಿಂಹನನ್ನು ಕಳುಹಿಸಿದನೆಂದು ಇತಿಹಾಸವು ಹೇಳುವುದು. ಇದು ನಮಗೆ ತಪ್ಪಾಗಿ ತೋರುವುದು. ಸಂಶಯಾತ್ಮಕನಾದ ಅವರಂಗಜೇಬನು ಮಹಾಯೋಧನಾದ ಜಯಸಿಂಹನು ತನ್ನ ಸಿಂಹಾಸನದ ಬಳಿಯಲ್ಲಿರುವುದು ಲೇಸಲ್ಲವೆಂದು ತಿಳಿದು, ಅವನನ್ನು ದಖ್ಖಣಕ್ಕೆ ಕಳುಹಿಸಿದ್ದನು; ಮತ್ತು ಜಯಸಿಂಹನು ತನ್ನ ಮೇಲೆ ಹಠಾತ್ತಾಗಿ ಬೀಳದಂತೆ ಅವನ ಮಗನಾದ ರಾಮಸಿಂಹನನ್ನು ಬಂಧಿಯಾಗಿ ಇಟ್ಟಿದ್ದನು. ಇಂತಹನನ್ನು ತನ್ನ ಪ್ರತಿದ್ವಂದ್ವಿಯಾದ ಶಿವಾಜಿಯೊಡನೆ ಒಳಸಂಚು ನಡೆಯಿಸುವುದು ಸಂಭವನೀಯವೆಂದು ತಿಳಿದು, ಸಮ್ರಾಟನು ಅವನ ಕೈಗೆ ವಿಶೇಷ ಅಧಿಕಾರವನ್ನು ಹಚ್ಚುತ್ತಿರಲಿಲ್ಲ; ಮಾತ್ರವಲ್ಲ ರಾಠೋರ್ ಸಂಸ್ಥಾನಾಧಿಪತಿಯಾದ ರಾಜಸಿಂಹನು ಇಂತಹ ಕಾರ್ಯಗಳಲ್ಲಿ ತನಗೆ ಅನುಕೂಲನೆಂದು ಸಮ್ರಾಟನು ತಿಳಿಯಲು ಅನೇಕ ಕಾರಣಗಳಿದ್ದುವು. ಹಾಗೂ ರಾಜಸಿಂಹನು ತನಗೆ ಅವರಂಗಜೇಬನೇ ಆಶ್ರಯದಾತಾರನೆಂದು ನಂಬಿ, ಅವನ

ಮೇಲೆ ಶ್ರದ್ಧಾಭಕ್ತಿಗಳನ್ನಿಟ್ಟಿದ್ದನು. ಹೆಚ್ಚೇಕೆ? ರಾಜಸಿಂಹನು ತನ್ನ ಮಗಳಾದ ಶೈಲಿನಿಯನ್ನು ಕಾರಣಾಂತರಗಳಿಂದ ಸಮ್ರಾಟನ ಶ್ರೀಮಂತ ಪುತ್ರನಾದ ಮು-ಆಜಮ್‌ನಿಗೆ (ಭಾವೀ ಶಹ ಆಲಮ್) ಕೊಡಲು ಉದ್ಯುಕ್ತನಾಗಿದ್ದನು. ಶಿವಾಜಿಯು, ತನ್ನನ್ನು ಇದಿರುಗೊಳ್ಳುವುದಕ್ಕೆ ಸಮ್ರಾಟನು ತಾನೇ ಬಾರದೆ ತೋರಿಸಿದ ಅನಾದರವನ್ನು ನೋಡದೆ ಹೋಗಲಿಲ್ಲ. ಅನಾದರಭಾವಕ್ಕೆ ಪ್ರತಿಕಾರಮಾಡಲು ಅದು ಸಮಯವಲ್ಲವೆಂಬುದನ್ನೂ ಆತನು ಮರೆತಿರಲಿಲ್ಲ.

ಶಿವಾಜಿಯು ಅವರಂಗಜೇಬನ ಸಂದರ್ಶನಕ್ಕೆ ಹೋಗಲು ನಿಶ್ಚಯಿಸಿದ ಮೊದಲಿನ ದಿವಸದ ರಾತ್ರಿಯಲ್ಲಿ ಪೂರ್ವೋಕ್ತ ಸಲ್ಲಾಪವು ನಡೆಯಿತು. ರಾಜಸಿಂಹನು ಮಹಡಿಯ ಮೆಟ್ಟನ್ನು ಹತ್ತಿ ಶೈಲಿನಿಯ ಕೊಟ್ಟಡಿಯನ್ನು ಪ್ರವೇಶಿಸಿದನು. ರಾಜಸಿಂಹನು ಪಕ್ಕದಲ್ಲಿದ್ದ ಆಸನವನ್ನು ತೆಗೆದುಕೊಂಡನು. ಶೈಲಿನಿಯು ತಂದೆಯ ಸಮ್ಮುಖದಲ್ಲಿ ವಿನೀತಭಾವದಿಂದ ನಿಂತಳು. ಸ್ವಲ್ಪ ಹೊತ್ತು ಇಬ್ಬರೂ ಮಾತೆತ್ತಲಿಲ್ಲ, ಬಳಿಕ ರಾಜಸಿಂಹನು ಎತ್ತಿದ ಹುಬ್ಬುಗಳಿಂದ "ಮಗು! ಶೈಲಿ! ರಾಜಕಾರ್ಯದಿಂದ ನಿನ್ನೊಡನೆ ಹಲವು ದಿನಗಳಿಂದ ಮಾತನಾಡಲು ಬಿಡುವಾಗಲಿಲ್ಲ. ಪಿತೃಭಕ್ತಿಯು ನಿನ್ನ ಹೃದಯದಲ್ಲಿ ಇರುವುದಾದರೆ ಎರಡು ಬುದ್ಧಿವಾದಗಳನ್ನು ಹೇಳಬೇಕೆಂದಿರುವೆನು" ಎಂದನು.

**ಶೈಲಿನಿ:**— "ಅಪ್ಪಾ! ಮಗಳು ತಂದೆಯ ಮಾತನ್ನು ಸಲ್ಲಿಸಬೇಕಾದಲ್ಲಿ ನಾನು ನಿನ್ನ ಅನುಜ್ಞೆಯನ್ನು ಮನ್ನಿಸದೆ ಇರಲಾರೆನು."

ರಾಜಸಿಂಹನು ಮೆಲ್ಲನೆ ನಗುತ್ತ, "ಪುಟ್ಟಮ್ಮಣ್ಣಿ! ನಾನು ಮುದುಕನಾದೆನು, ನನಗೆ ೬೫ ವರ್ಷ ತುಂಬಿತು. ಇನ್ನು ಹೆಚ್ಚು ಕಾಲ ಬದುಕಲಾರೆನು. ಪ್ರಬುದ್ಧಳಾದ ನೀನು ಸುಖವಂತಳಾಗಿದ್ದರೆ ನನ್ನ ಮುಪ್ಪನ್ನು ನಿಶ್ಚಿಂತೆಯಿಂದ ಕಳೆಯವೆನು."

**ಶೈಲಿನಿ**:— "ಮುಪ್ಪಿನಲ್ಲಿ ನಿನಗೆ ಯಾವುದೊಂದೂ ಚಿಂತೆ ಬಾರದೆ ಇರಲಿ ಎಂದು ನಾನು ದೇವರೊಡನೆ ಪ್ರಾರ್ಥಿಸುವೆನು. ನಿನ್ನ ವೃದ್ಧಾಪ್ಯವು ಸಂತೋಷಮಯವಾಗುವಂತೆ ಆತನು ಕರುಣಿಸಲಿ!"

**ರಾಜಸಿಂಹ**:— "ನೀನು ಮೊಗಲ್ ಸಾಮ್ರಾಜ್ಯದ ರಾಣಿಯಾಗುವುದರಿಂದ ಉಂಟಾಗುವಷ್ಟು ಸಂತೋಷನನ್ನು ನನಗೆ ವೃದ್ಧಾಪ್ಯದಲ್ಲಿ ಮತ್ತಾವುದೂ ಕೊಡಲಾರದು."

**ಶೈಲಿನಿ**:— "ಅಪ್ಪಾ! ನನಗೆ ರಾಣಿಯಾಗುವಷ್ಟು ಬೇಸರವು ಬೇರೊಂದಿಲ್ಲವೆಂದು ನಾನು ಮೊದಲೇ ನಿನಗೆ ತಿಳಿಸಿರುವೆನಷ್ಟೆ. "

**ರಾಜಸಿಂಹ**:— "ನೀನು ಅಂದು ವಿಚಾರಮಾಡಿರಲಿಲ್ಲ. ನೀನು ವಿಚಾರ ಮಾಡಬೇಕೆಂದು ಸಾಕಷ್ಟು ಅವಕಾಶಕೊಟ್ಟೆನು."

**ಶೈಲಿನಿ**:—"ವಿಚಾರ ಮಾಡಿದಷ್ಟಕ್ಕೆ ರಾಜಪತ್ನಿಯಾಗುವುದಕ್ಕಿಂತಲೂ ಬಡವನ ತೊತ್ತಾಗುವುದು ಲೇಸೆಂದು ದೃಢವಾಗುವುದು."

ರಾಜಸಿಂಹನು ಸ್ವಲ್ಪ ಬೆಚ್ಚನಾಗಿ "ಶೈಲಿನಿ! ಸಾಮ್ರಾಜ್ಯದ ಚಕ್ರವರ್ತಿನಿ ಎನ್ನಿಸಿಕೊಳ್ಳುವುದಕ್ಕಿಂತಲೂ, ಅಧಿಕವಾದ ಶ್ರೇಯಸ್ಸು ನಿನಗೆ ಮತ್ತೊಂದಿರುವುದೇ? ಚಕ್ರವರ್ತಿಯ ಮಾವನೆನ್ನಿಸಿಕೊಳ್ಳುವುದಕ್ಕಿಂತಲೂ, ವಿಶೇಷನಾದ ಬಹುಮಾನವು ನನಗೆ ಬೇರೊಂದುಂಟೆ? ರಾಜಕುಲದವರೆಂದು ಹೇಳಿಸಿಕೊಳ್ಳುವುದಕ್ಕಿಂತಲೂ ಅಧಿಕತರವಾದ ಕೀರ್ತಿಯೂ ಗೌರವವೂ ನಮ್ಮ ವಂಶಕ್ಕೆ ಯಾವುವು? ನೀನು ಆಡಿದ್ದೇ ನ್ಯಾಯ; ನೀನು ಮಾಡಿದ್ದೇ ಧರ್ಮ. ಹೀಗಿರಲು ಸಾಮಾನ್ಯಪುರುಷರಿಗೆ ನಿನ್ನ ಕೈಕೊಟ್ಟು ನಮ್ಮ ಕುಲಕ್ಕೆ ಕಳಂಕವನ್ನು ತಂದಿಕ್ಕಬೇಡ, ಕಂಡೆಯಾ?" ಎಂದನು.

ಶೈಲಿನಿಯು ಉದ್ರೇಕದಿಂದ "ಅಪ್ಪಾ! ನೀನೆನ್ನುವ ದುರ್ಗತಿಗೆ ಈ ದೇಹವು ಇಳಿಯುವ ಮೊದಲೇ ಅದರಿಂದ ಪ್ರಾಣವು ಹಾರಿಹೋಗಲಿ! ಅಕ್ಬರನಿಗೆ ಹೆಣ್ಣುಕೊಟ್ಟ ರಾಜಪುತ್ರರಿಗೆ ಯಾವ ಗೌರವವು ಹೆಚ್ಚಿತು? ರಾಜಾ ಮಾನಸಿಂಹನ ಮಗಳು ಸೇಲಿಮನ

ಪತ್ನಿಯಾಗಿ ಯಾವ ಪ್ರಖ್ಯಾತಿಯನ್ನು ಹೊಂದಿದಳು? ಪ್ರಕೃತದಲ್ಲಿ ಅವರಂಗಜೀಬನ ಪತ್ನಿಯಾದ ಉದಿಪುರಿಯು ಹಗಲಿರುಳು ಕಣ್ಣೀರು ಮಿಡಿಯುವಳೇಕೆ? ಅವರಂಗಜೀಬನ ಚಿನ್ನದ ಕೊಳಕ್ಕೆ ಕೈಯೊಡ್ಡಿದ ನಮ್ಮ ಕುಲಕ್ಕೆ ಯಾವ ಯಶಸ್ಸು ಬಂದಿತು? ಅಪ್ಪಾ! ನಾನು ಯಥಾರ್ಥವಾಗಿ ಹೇಳುವೆನು. ನಾನು ಬಡ ಒಕ್ಕಲಿಗನ ಮನೆಯಲ್ಲಿ ಹುಟ್ಟಬಾರದಿತ್ತೇ? ನನಗೆ ಬೇಕಾದವನನ್ನು ವರಿಸಿ ಸುಖವಾಗುತ್ತಿದ್ದೆನು. ನಿನ್ನ ಉದರದಲ್ಲಿ ಜನಿಸಿ ಕಾಗೆಯನ್ನು ವರಿಸಬೇಕೇ?" ಎಂದಳು.

ರಾಜಸಿಂಹನು ಅಡಗಿಸಿದ ಸಿಟ್ಟಿಂದ "ಮುಅಜಮನಿಗಿಂತಲೂ ನಿನಗೆ ಯೋಗ್ಯನಾದ ವರನು ಮತ್ತೊಬ್ಬನಿಲ್ಲ. ಅವನ ಪಾಣಿಗ್ರಹಣವೇ ನಮ್ಮ ವಂಶೋದ್ಧರಣ. ಮಗು! ಕಂಡನರನ್ನು ಕೈಹಿಡಿದು ಕುಲವನ್ನು ಕಳಂಕಿಸಬೇಡ" ಎಂದು ಬಿರುಗಣ್ಣಿಂದ ನೋಡಿದನು.

ಶೈಲಿನಿಯು ಧೈರ್ಯಗೊಂಡು "ಅಪ್ಪಾ! ನಿನ್ನೊಡನೆ ಬಾಯಿಬಿಟ್ಟು ಹೇಳಿದರೆ, ಲಜ್ಜಾಹೀನಳೆಂದು ನೀನು ಭಾವಿಸುವುದಿಲ್ಲವಾದರೆ ನಾನು ಖಂಡಿತವಾಗಿ ಹೇಳುವೆನು; ಹಿಂದೂ ರಾಜಾಧಿರಾಜರನ್ನು ಬಿಟ್ಟು, ನಮ್ಮ ಸಂಸ್ಥಾನದ ಸ್ವಾತಂತ್ರ್ಯವನ್ನು ಮೊಗಲರಿಗೆ ಎಂದು ಬಲಿಕೊಟ್ಟೆವೋ ಆಗಲೇ ನಮ್ಮ ಕುಲವು ಕಳಂಕಿತವಾಗಿದೆ" ಎಂದಳು.

ರಾಜಸಿಂಹನು ಕೋಪವನ್ನು ತಡೆಯಲಾರದೆ ಎದ್ದು ನಿಂತನು; ಮಗಳ ಮಾರ್ನುಡಿಗೆ ಉತ್ತರಕೊಡಲಾರದೆ ನೀರವನಾದನು. ಒಂದು ನಿಮಿಷದ ಮೇಲೆ ಹಿಂದೂ ರಾಜಾಧಿರಾಜನು ಯಾರೆಂದು ಮಗಳೊಡನೆ ಗರ್ಜಿಸಿ ಕೇಳಿದನು. ಶೈಲಿನಿಯು ಮಂದಸ್ವರದಿಂದ, ಭವಾನಿಭಕ್ತನಾದ ರಾಮದಾಸ ಶಿಷ್ಯನಾದ ಶಿವಾಜಿಯನ್ನು ಮುಕ್ತಕಂಠದಿಂದ ಹೊಗಳಿದಳು. ಶಿವಾಜಿಯು ವಿಶ್ವಾಸಘಾತುಕನಾದ, ಧರ್ಮದ್ರೋಹಿಯಾದ, ತುಂಡು ಪಾಳೆಯಗಾರನೆಂದು ತಂದೆಯು ತರ್ಕಿಸಿದನು. ಶೈಲಿನಿಯು ಅಲ್ಲಿಯೂ ಬಿಡದೆ, ಕುಲಸಂಹಾರಕನಾದ ಪಾಷಂಡನಾದ ಅವರಂಗಜೀಬನು ಹಿಂದುಗಳ ಅರಸನಲ್ಲವೆಂದೂ, ಶಿವಾಜಿಯೇ ಭಾರತವರ್ಷದ

ಮಹಾರಾಜನೆಂದೂ ಬಿಗಿಹಿಡಿದು ಸಕಾರಣವಾಗಿ ತೋರಿಸಿದಳು. ಮಗಳ ಮಾತುಗಳಿಗೆ ಮರುಮಾತನಾಡದೆ ರಾಜಸಿಂಹನು ಕೆಳಕ್ಕೆ ಇಳಿದನು. ಇಳಿದು ಹೋಗುವಾಗ, ಮರಾಟನ ಮೂರ್ತಿಯು ಶೈಲಿನಿಯ ಹೃದಯಮಂದಿರದಲ್ಲಿ ಪ್ರತಿಷ್ಠಿತವಾಗಿರುವುದೆಂದು ನಿಶ್ಚಯಮಾಡಿಕೊಂಡು ಹೋದನು. ಕೋಪಾನಲದಿಂದ ದಗ್ಧವಾದ ಅವನ ಮನಸ್ಸು ಶೈಲಿನಿಯ "ಇಚ್ಛಿತ ವರ"ನನ್ನು ಸರಿಯಾಗಿ ಕಂಡುಹಿಡಿಯಲಾರದೆ ಹೋಯಿತು.

ಕಿ. ಶಕೆಯ ೧೬೬೬ನೆಯ ವರ್ಷದ ಡಿಲ್ಲಿಯು ಪ್ರಾಚೀನ ಹಿಂದೂ ರಾಜರ ಡಿಲ್ಲಿಯಾಗಿರಲಿಲ್ಲ. ಅದರ ಹೆಸರು ಬೇರೆಯಾದಂತೆ, ಅದರ ಪೂರ್ವಸ್ಥಿತಿಯು ಪರಿವರ್ತಿತವಾಗಿತ್ತು. ಅದು ಶಹಾಜಹಾನ್‌ಬಾದ್ ಎಂದು ಪ್ರಖ್ಯಾತಿಗೊಂಡಿತ್ತು. ಮೊಗಲ್ ಚಕ್ರೇಶ್ವರನಾದ ಶಹಾಜಹಾನನು ಪ್ರಾಚೀನ ಡಿಲ್ಲಿಯನ್ನು ಕೆಡವಿ, ತನ್ನ ಹೆಸರಿನ ಮಹಾನಗರವನ್ನು ಯಮುನಾ ನದಿಯ ತೀರದಲ್ಲಿ ಕಟ್ಟಿಸಿದನು. ಕಟ್ಟುವುದಕ್ಕೆ ೯ ವರ್ಷ ಹಿಡಿಯಿತು; ೬೦ ಲಕ್ಷ ರೂಪಾಯಿ ತಗಲಿತು. ನಗರದ ಸುತ್ತಲು ಸಾಂದ್ರವಾದ ತರುವನಗಳು; ಅಲ್ಲಲ್ಲಿ ಶಾಲಿಸಮೃದ್ಧವಾದ ಹೊಲಗಡ್ಡೆಗಳು. ಕಲ್ಲಿನ ಪ್ರಾಕಾರವೊಂದು ನಗರವನ್ನು ವೇಷ್ಟಿಸಿತ್ತು—೭ ಮೈಲು ಸುತ್ತಳತೆಯ ಭದ್ರವಾದ ಮಂಡಲಾಕಾರವಾದ ಪ್ರಾಕಾರ. ಪಾಕಾರದ ಹೊರಗಡೆಯಲ್ಲಿ ಇಕ್ಕಟ್ಟಾದ ಬೀದಿಗಳು ನೆಲವನ್ನು ಸೀಳಿಹೋಗಿದ್ದುವು. ಇವುಗಳ ಇಕ್ಕಡೆಗಳಲ್ಲಿ ಮನಸಬ್ದಾರರ ಮಂದಿರಗಳು, ಉಮ್ರಾಗಳ ಮಹಡಿಗಳು; ರಾಜಾನುಚರರ ಗೃಹಗಳು. ಸ್ವಲ್ಪ ದೂರದಲ್ಲಿ ರಾಜಭಟರ ಗೂಡಾರಗಳು; ಮುಂದೆ ಮುಂದೆ ವರ್ತಕರ ಅಂಗಡಿಗಳು, ವಾಣಿಜ್ಯ ಶಾಲೆಗಳು; ಅಲ್ಲಲ್ಲಿ ಬಡಬಗ್ಗರ ಹುಲ್ಲುಗುಡಿಸಲುಗಳು. ಇವುಗಳನ್ನು ಬಿಟ್ಟು ಮಹಾರಾಷ್ಟ್ರ ಶಿಬಿರವು ಪ್ರತ್ಯೇಕವಾದ ಒಂದು ಸ್ಥಳದಲ್ಲಿ ಇಳಿದಿತ್ತು.

ಹಿಂದೆ ಹೇಳಿದ ಘಟನಾವಳಿಯು ನಡೆದ ಮರುದಿನ ಶಿವಾಜಿಯು ಅವರಂಗಜೇಬನ ಸಂದರ್ಶನಕ್ಕೆ ಹೋಗಲು ಸಿದ್ಧನಾಗಿದ್ದನು. ರಾಜಸಿಂಹನು

ಬಾದಶಹನ ಆಜ್ಞಾನುಸಾರವಾಗಿ ಶಿವಾಜಿಯನ್ನೂ ಅವನ ಪರಿಜನರನ್ನೂ ಕರೆದುಕೊಂಡು ಹೋಗುವುದಕ್ಕೆ ಮಹಾಸಂಭ್ರಮದೊಡನೆ ಸನ್ನದ್ಧನಾಗಿ ಬಂದನು. ಬಾದಶಹನ ಶ್ರೀಮಂತಪುತ್ರನಾದ ಮುಆಜಮನೂ ರಾಜಸಿಂಹನೊಡನೆ ಬಂದಿದ್ದನು. ರಾಜಸಿಂಹನು ಶಿಬಿರವನ್ನು ಪ್ರವೇಶಿಸಿದನು. ಶಿವಾಜಿಯು ಒಳಕ್ಕೆ ಹೋಗಿ ತನ್ನ 'ಗರ್ಭಧಾರಿಣಿಯಾದ ಜೀಜಾ ಬಾಯಿಯನ್ನೂ ದೀಕ್ಷಾಗುರುವಾದ ರಾಮದಾಸನನ್ನೂ' ಸ್ಮರಿಸಿ ಹೊರಕ್ಕೆ ಬಂದು ಎಲ್ಲರ ಮಾನಮರ್ಯಾದೆಗಳನ್ನು ಸ್ವೀಕರಿಸಿದನು. ಈಗಲೂ ಅವರಂಗಜೀಬನು ಬರಲಿಲ್ಲವೆಂದು ಮನಸ್ಸಿನಲ್ಲಿ ಸ್ವಲ್ಪ ಕುದಿದನು. ಬಳಿಕ ಶಿವಾಜಿಯೂ ರಾಜಹಿಂಹನೂ ಅಲಿಂಗನ ಮಾಡಿಕೊಂಡರು. ಆಲಿಂಗನ ಕಾಲದಲ್ಲಿ ರಾಜಸಿಂಹನ ಮುಖವು ಸ್ವಲ್ಪ ಭೀತಿವ್ಯಂಜಕವಾಗಿತ್ತು. ಶಿವಾಜಿಯು ರೇಶ್ಮೆಯ ಪಾಗುವನ್ನು ತಲೆಗೆ ಸುತ್ತಿಕೊಂಡು, ಅವರಂಗಜೀಬನು ಉಚಿತವಾಗಿ ಕಳುಹಿಸಿದ ಅಮೂಲ್ಯವಾದ "ಖಿಲಾತನ್ನು" ತೊಟ್ಟುಕೊಂಡು, ತನ್ನ ಸಹವಾಸಿಯಾದ ಭವಾನಿ ಎಂಬ ಕತ್ತಿಯನ್ನು ಸೊಂಟದಲ್ಲಿ ಬಿಗಿದುಕೊಂಡು, ತನ್ನ ಎಂಟು ವರ್ಷದ ಸಂಭಾಜಿಯೊಡನೆ ರಾಜಗಜವನ್ನೇರಿ ಹೊರಟನು; ಅಂಗರಕ್ಷೆಯವರು ಬಳಿ ಸಂದರು. ಆಪ್ತರೂ ಅನುಚರರೂ ಪಲ್ಲಕ್ಕಿಗಳನ್ನು ಹತ್ತಿದರು. ವಾದ್ಯಗಳ ನಿಸ್ವನ, ಜನಸ್ತೋಮದ ಚೀತ್ಕಾರ, ಅಶ್ವಗಳ ಹೇಷಧ್ವನಿ, ಮೊದಲಾದ ವಿವಿಧ ಕೋಲಾಹಲದಲ್ಲಿ ಶಿವಾಜಿಯು ತನ್ನ ಪ್ರಸ್ತಾನದ ಗೌರವಾರ್ಥವಾದ ತೋಪುಗಳ ಗುಡುಗನ್ನು ಕೇಳಲಿಲ್ಲ. ಶಿವಾಜಿಯು ಮನಸ್ಸಿನ ಖಿನ್ನತೆಯನ್ನು ಮುಖದಲ್ಲಿ ತೋರ್ಪಡಿಸದೆ, ಡಿಲ್ಲಿಯ ಪ್ರಾಚೀನ ವೈಭವವನ್ನು ಎಣಿಸುತ್ತ, ಗಜಾರೋಹಿಯಾಗಿ ಹೋದನು. ಜನಸಂದೋಹವು ನಗರದ ಹೆಬ್ಬಾಗಿಲನ್ನು ದಾಟಿ ಹೋಯಿತು. ಪ್ರಸ್ತರ ನಿರ್ಮಿತವಾದ, ಗಗನ ಚುಂಬಿಯಾದ, ನೂರಾರು ಮಿನಾರತುಗಳು ಬುರುಜುಗಳು ಪ್ರಕಾಶವಾದುವು. ಲೋಕೋನ್ನತವಾದ ಕುತಬ್‌ಮಿನಾರಿನ ಶಿರಸ್ಸು ಸಮೀಪಸ್ಥವಾದಂತೆ ಕೋರಿತು. ಜನಸಂದೋಹವು ಜುಮ್ಮಾ ಮಶೀದಿಯ ಬಳಿಯಿಂದ ಹರಿಯುತ್ತ ಮುಂದರಿಸಿತು. ಈ ಲೋಕೋತ್ತರನಾದ ಮಹಾರಾಷ್ಟ್ರ ವೀರನನ್ನು ನೋಡುವುದಕ್ಕೆ ಹಿಂದುಸ್ಥಾನದ ಜನರೆಲ್ಲರು ಅಸಂಖ್ಯಾತರಾಗಿ

ನಗರದ್ವಾರವನ್ನು ಹಿಡಿದು, ಎರಡು ಬೀದಿಗಳಲ್ಲಿಯೂ ಸಂದಣಿಸಿದ್ದರು. ಆನೆಯು ರಾಜಮಂದಿರದ ಮುಂದುಗಡೆಯ ಚಾಂದಣೀ ಚೌಕಕ್ಕೆ ಬರುತ್ತಲೇ ಜನರ ನುಗ್ಗಾಟವು ಅಧಿಕವಾಯಿತು. ಚೌಕದಲ್ಲಿ ಪಹರೇ ಮಾಡುತ್ತಲಿದ್ದ ರಜಪೂತರು ಕುದುರೆಗಳನ್ನು ಹತ್ತಿ ಸಾಲಾಗಿ ನಿಂತುಬಿಟ್ಟರು. ಜ್ಯೋತಿಷ್ಯರು ತಮ್ಮ ಚಿತ್ರಾಸನಗಳನ್ನು ಬಿಟ್ಟು, ಗಜಾರೋಹಿಯಾದ ಶಿವಾಜಿಯನ್ನು ವಿಸ್ಮಿತ ದೃಷ್ಟಿಯಿಂದ ನೋಡುತ್ತಲಿದ್ದರು. ವರ್ತಕರು, ವಾಣಿಜ್ಯರು, ವಿಪ್ರರು, ವೀಟಕಾಸ್ತ್ರೀಯರು, ವುಸ್ತಾದರು, ವೂಮ್ರಾಗಳು, ವೇಶ್ಯಾಸ್ತ್ರಿಯರು, ವೈದ್ಯರು, ವಂದಿಪುತ್ರರು, ವಸ್ತ್ರಕಾರರು ಮೊದಲಾದ ಸಕಲ ವರ್ಣಾಶ್ರಮದವರು ಚೌಕದಿಂದ ಕೆಳಕ್ಕೆ ಇಳಿದು ಜನ ಸಂದೋಹದೊಡನೆ ತೆರಳಿದರು. ಶಿವಾಜಿಯು ಅವರಂಗಜೀಬನ ರಾಜಮಂದಿರದ ಬಳಿಯಲ್ಲಿ ಬಂದು ಮುಟ್ಟಿದನು. ಜನಗಳ ನೂಕಾಟವು ಅಧಿಕವಾಯಿತು. ಇದರಿಂದಲೋ ಅಥವಾ ಇನ್ನಾವ ಕಾರಣದಿಂದಲೊ ಶಿವಾಜಿಯ ಗಜವು ಸೊಕ್ಕೇರಿ ಜನಗಳನ್ನೆಲ್ಲಾ ಹಾನಿಮಾಡುವಂತಿತ್ತು. ಶಿವಾಜಿಯು ಗಜಯೋಧನಿಗೆ ತಕ್ಕುದಾದ ಚಾತುರ್ಯದಿಂದ ಅದನ್ನು ಸಮಾಧಾನಗೊಳಿಸಿ ಕೆಳಕ್ಕೆ ಇಳಿದನು. ಆದರೂ ಗೌರವಾರ್ಥದ ತೋಪುಗಳು ಹಾರಲಿಲ್ಲ. ಶಿವಾಜಿಯು ಮುಖವನ್ನೆತ್ತಿ ಮೇಲೆ ನೋಡಿದನು. ರಾಜದ್ವಾರದ ಬಳಿಯಲ್ಲಿ ಶಿಲಾಗಜಗಳ ಮೇಲೆ ಅಕ್ಬರನು ಇರಿಸಿದ ಪುತ್ತ ಮತ್ತು ಜಯಮಲ್ಲ ಎಂಬ ರಾಜಪುತ್ರವೀರರ ಪ್ರತಿಮೆಗಳನ್ನು ದೃಷ್ಟಿಸಿದನು. ಮನಸ್ಸಿನ ಖಿನ್ನತೆಯು ಇಮ್ಮಡಿಸಿದಂತಾಯಿತು. ಪ್ರತಿಮೆಗಳ ಮೇಲಿಂದ ದೃಷ್ಟಿಯನ್ನು ಹಿಂತೆಗೆಯಲಾರದೆ ಶಿವಾಜಿಯು ತಾನೂ ಪ್ರತಿಮೆಯಂತೆ ನಿಂತುದನ್ನು ಕಂಡು, ರಾಜಸಿಂಹನು ಮುಆಜಮ್ ನೊಡನೆ ಶಿವಾಜಿಯ ಬಳಿಗೆ ಬಂದನು.

**ರಾಜಸಿಂಹ**:— “ಮುಂದೆ ದಯಮಾಡಬೇಕು.”

ಶಿವಾಜಿಯು ಉಚ್ಚಸ್ವರದಿಂದ “ಬಾದಶಹರು ಇನ್ನೂ ಬರಲಿಲ್ಲವೇಕೆ?” ಎಂದು ಕೇಳಿದನು.

ರಾಜಸಿಂಹನು "ಬಾದಶಹರ ಪಕ್ಷವಾಗಿ ಯುವರಾಜರು ಬಂದಿರುವರು" ಎಂದು ಹೇಳಿ ಮುಆಜಮನನ್ನು ತೋರಿಸಿ, ಕೈಕೊಟ್ಟು ಶಿವಾಜಿಯನ್ನು ಸನ್ಮಾನಪೂರ್ವಕವಾಗಿ ಚಾಂದಿ ರಸ್ತೆಗೆ (ಬೆಳ್ಳಿಯ ಬೀದಿಗೆ) ಕರೆದು ತಂದನು.

ರಸ್ತೆಯ ಉಭಯ ಪಾರ್ಶ್ವಗಳಲ್ಲಿ ಜರತಾರಿನ ವಸ್ತ್ರಶಾಲೆಗಳು, ರೇಶ್ಮೆ ಬಟ್ಟೆಯ ಅಂಗಡಿಗಳು, ಆಯುಧಶಾಲೆಗಳು, ಮದ್ದುಗುಂಡನ್ನು ತಯಾರಿಸುವ ಆಲಯಗಳು ತೋರಿಬಂದುವು. ಶಿವಾಜಿಯು ಪಾದಚಾರಿಯಾಗಿ ಮುಂದು ಗಡೆಯಲ್ಲಿದ್ದ ರಾಜಾಂಗಣನನ್ನು ಸೇರಿದನು.

ಅವರಂಗಜೇಬನು "ಅಮ್‌ಖಾಸ್‌ಖಾನೆ"ಯಲ್ಲಿ (ಆಸ್ಥಾನಮಂದಿರ) ಸಿಂಹಾಸನಾರೂಢನಾಗಿದ್ದನು. ತನ್ನ ವೈಭವದಿಂದಲೂ ಮಹತ್ವದಿಂದಲೂ ಶಿವಾಜಿಯನ್ನು ಬೆರಗುಗೊಳಿಸಬೇಕೆಂದು ಬಾದಶಹನು "ಆಮ್‌ಖಾಸ್‌ಖಾನೆ"ಯನ್ನು ಈ ದಿನ ಪರಿಷ್ಕಾರಗೊಳಿಸಿದ್ದನು. ಮಂದಿರದ ಆಕಾರವು ಪರಿಪಾಟಿಯಾಗಿತ್ತು. ಸುತ್ತಲ್ಲೆಲ್ಲಾ ಧನುಸ್ಸಿನ ಆಕೃತಿಯ ಅಲಂಕೃತವಾದ ಕಮಾನುಗಳು; ರೇಶ್ಮೆಯಿಂದ ಹೊದಿಸಿದ್ದ ಅಂತಸ್ತು; ಇದಕ್ಕೆ ಆಧಾರವಾಗಿ ನಿಂತ ಚಿನ್ನದ ವರಕಿನ ಕಂಬಗಳು; ಈ ಸ್ತಂಭಗಳಲ್ಲಿ ಚಿತ್ರಿತವಾದ ಕೃತಿಮ ಪುಷ್ಪಗಳು, ಲತೆಗಳು, ನಿಕುಂಜಗಳು, ಮಂದಿರದ ಉಭಯ ಪಾರ್ಶ್ವಗಳಲ್ಲಿ ಒಂದರ ಮೇಲೆ ಒಂದಾಗಿ ಉನ್ನತವಾದ ಮೂರು ವೇದಿಕೆಗಳು; ಸುವರ್ಣಕೃತವಾದ, ರಜತಮಯವಾದ, ಚಂದ್ರಕಾಂತನಿರ್ಮಿತವಾದ ಮೂರು ವೇದಿಕೆಗಳು. ಮಾಂಡಲಿಕರೂ ರಾಜಕುಲದವರೂ ಎತ್ತರವಾದ ವೇದಿಕೆಯನ್ನು ಏರಿದ್ದರು. ಮಿಕ್ಕವರೆಲ್ಲರು ಉಳಿದ ಎರಡು ಜಗುಲಿಗಳ ಮೇಲೆ ಪದವಿಗೆ ಅನುಸಾರವಾಗಿ ಕುಳಿತಿದ್ದರು. ಮಂದಿರದ ಒಂದು ಭಾಗದಲ್ಲಿ "ಜಾರೂಕಾ" ಎಂಬ ವಿಶಾಲವಾದ ಕಿಟಕಿ; ದ್ವಾರಗಳಿಲ್ಲದ, ಕಟಾಂಜನನಿಲ್ಲದ ಕಿಟಿಕಿ. ಇಲ್ಲಿಯೇ ಮೊಗಲ್ ಚಕ್ರವರ್ತಿಗಳು ದಿನಂಪ್ರತಿ ಒಂದು ಸಲ ಬಂದು, ಪ್ರಜೆಗಳಿಗೆ ದೃಶ್ಯರಾಗುತ್ತಿದ್ದರು. "ಜಾರೂಕ"ದ ಹಿಂದೆ ಸ್ವಯಂ ಬಾದಶಹನು ವಿರಾಜಮಾನನಾಗಿದ್ದನು. ಜಾತಿ

ಸುವರ್ಣನಿರ್ಮಿತವಾದ, ಅಮೂಲ್ಯ ನವರತ್ನ ಪ್ರೋಕ್ಷಿತವಾದ, ದ್ವಾದಶಕಾಂಚನಸ್ತಂಭಾದೃತವಾದ ಮಯೂರಾಸನವನ್ನು ಮೊಗಲ್ ಚಕ್ರೇಶ್ವರನು ಆರೋಹಿಸಿದ್ದನು. ಅವನರಂಗಜೀಬನು ತನ್ನ ಜೀವ ಕಾಲದಲ್ಲಿ ಮಯೂರ ಪೀಠವನ್ನು ಏರಿದ್ದು ಈ ಸಲವೇ. “ಶಿವಾಜಿಯು ಮಾಯಾವಿ” ಎಂದೆಣಿಸಿ, ಲೋಹಕವಚನ್ನೂ ಅಸ್ತ್ರಶಸ್ತ್ರಗಳನ್ನೂ ತೊಟ್ಟು, ಮೈಗಾವಲನ್ನಿಟ್ಟುಕೊಂಡು ಸಿಂಹಾಸನದಲ್ಲಿ ಅವನು ಕುಳಿತಿದ್ದನು.” ಜನಸ್ತೋಮದಲ್ಲಿ ಶಿವಾಜಿ ಯಾರೆಂದು ಅವರಂಗಜೀಬನು ತನ್ನವರೊಡನೆ ಕೇಳಿದನು. ಸಮೀಪದಲ್ಲಿದ್ದ ರಜಪೂತ ಮಾಂಡಲಿಕನೊಬ್ಬನು ಕೈಜೋಡಿಸಿ ನಿಂತು, ಪ್ರತಿಭಾಮಯವಾದ ಮುಖವುಳ್ಳವನಾಗಿಯೂ, ಶುಕನಾಸನಾಗಿಯೂ, ಸ್ವಲ್ಪ ನೀಲವರ್ಣನಾಗಿಯೂ, ಆಜಾನುಬಾಹುವಾಗಿಯೂ, ಕುಬ್ಜನಾಗಿಯೂ ಇದ್ದು ಗಂಭೀರಗತಿಯಿಂದ ಬರುತ್ತಿದ್ದ ಶಿವಾಜಿಯನ್ನು ತೋರಿಸಿದನು. ಶಿವಾಜಿಯು ಆಸ್ಥಾನಮಂದಿರದಲ್ಲಿ ಪದಾರ್ಪಣ ಮಾಡಿದನು. ಒಮ್ಮೆ ತಟಸ್ಥನಾಗಿ ನಿಂತು “ಆಮ್‌ಖಾಸ್‌ಖಾನೆಯ” ಸೌಭಾಗ್ಯಸೌರಂಭವನ್ನು ನೋಡಿದನು; ನೋಡಿ ಸಾಮಾನ್ಯರಂತೆ ಶಿವಾಜಿಯು ಬೆರಗಾಗಲಿಲ್ಲ. ಮೊಗಲ್ ಮಹತ್ವವನ್ನು ಹಿಂದೂ ಅಲ್ಪತೆಯ ಮೇಲೆ ಒತ್ತಿಬಿಡಬೇಕೆಂದು ಅವರಂಗಜೇಬನು ಮನಸ್ವಿಯಾಗಿ ಇದನ್ನೆಲ್ಲಾ ಮಾಡಿರುವನು ಎಂದು ಶಿವಾಜಿಯು ಕೂಡಲೇ ತಿಳಿದುಬಿಟ್ಟನು. ಶಿವಾಜಿಯ ದೃಷ್ಟಿಗಳು ಸುವರ್ಣವೇದಿಕೆಯ ಮೇಲಿದ್ದ ರಜಪೂತರ ಕಡೆಗೆ ಚಲಿಸಿದುವು ಅಷ್ಟರಲ್ಲಿ ರಾಜಸಿಂಹನು ಹತ್ತಿರಕ್ಕೆ ಬಂದು “ರಾಜರೇ! ಇಲ್ಲಿಂದ ಮುಂದರಿಸಬೇಕಾದರೆ ಬಾದಶಹರಿಗೆ ನೆಲವನ್ನು ಮುಟ್ಟಿ ಮೂರು ಸಲ ಸಲಾಂ ಮಾಡುವುದು ಪದ್ಧತಿಯಾಗಿದೆ. ಎಂದನು. ಶಿವಾಜಿಯು ತಿರುಗಿ ನೋಡಿದನು. ಬಳಿಕ ಉಚ್ಚಸ್ವರದಿಂದ “ಇಷ್ಟು ನಮ್ಮಿಂದಾಗಲಾರದು; ಈ ಜನ್ಮದಲ್ಲಿ ಯಾವ ಮುಸಲ್ಮಾನನಿಗೂ ಹೀಗೆ ನಮಸ್ಕಾರ ಮಾಡಿಲ್ಲ. ಮುಂದೆಯೂ ಮಾಡಲಾರೆವು” ಎಂದನು.

ರಾಜಸಿಂಹನು ವ್ಯಗ್ರನಾಗಿ ಕಳವಳದಿಂದ, “ಇದೊಂದು ಕಠಿನ ಸಮಸ್ಯೆಯಾಗಿದೆಯಲ್ಲ! ಸಮ್ರಾಜರು ಕೋಪಿಸಿಕೊಂಡರೆ, ಕಾರ್ಯವು ಕೆಡುವುದು” ಎಂದನು.

ಶಿವಾಜಿಯು ತನ್ನ ಎಡಕ್ಕೆ ಇದ್ದ ರಾಜಪುತ್ರರನ್ನು ನೋಡಿ “ಇವರೆಲ್ಲರು ಅದೇ ಪ್ರಕಾರವಾಗಿ ಮಾಡಿ, ತಮ್ಮ ಆಸನವನ್ನು ಏರಿದರೇ?” ಎಂದು ಕೇಳಿದನು.

ರಾಜಸಿಂಹನು ಬಾದಶಹನ ಕಡೆಗೆ ನೋಡುತ್ತ, ಶಿವಾಜಿಯೊಡನೆ, “ಹಾಗೆ ಮಾಡದೆ ಮುಂದರಿಸಕೂಡದು” ಎಂದನು. ಅವರಂಗಜೀಬನು ಪಕ್ಕದಲ್ಲಿದ್ದ ರಾಜಪುತ್ರರೊಡನೆ ಏನನ್ನೊ ಮಾತಾಡುತ್ತಿದ್ದನು.

ಶಿವಾಜಿಯು ಸ್ವಲ್ಪ ಹೊತ್ತು ಮನಸ್ಸಿನಲ್ಲಿಯೇ ಚಿಂತಿಸಿದನು. ಬಳಿಕ ರಾಜಸಿಂಹನೊಡನೆ “ಈ ಮಾತು ಮನ್ನಿಸಬೇಕಾಗುವುದು. ಇಲ್ಲವಾದರೆ ಕೆಲಸವು ಕೆಟ್ಟು ಹೋಗುವುದೆಂಬುದು ನಿಜ” ಎಂದನು.

ಶಿವಾಜಿಯು ಮುಂದೆ ಬಂದು ಮೂರು ಸಲ ಸಲಾಂ ಮಾಡಿದನು; ಆದರೆ ನೆಲವನ್ನು ಮುಟ್ಟಿ ಕೈಮುಗಿಯಲಿಲ್ಲ. ಅವರಂಗಜೀಬನು ಅದನ್ನು ಓರೆಗಣ್ಣಿನಿಂದ ನೋಡದೆ ಹೋಗಲಿಲ್ಲ. ರಾಜಸಿಂಹನು ತುಟಿಯೊಳಗೆ ನಗುವಂತಿದ್ದನು. ಶಿವಾಜಿಗೆ ಆಸನವನ್ನು ಮೊದಲೆ ಒದಗಿಸಿದ್ದರೂ ಬಾದಶಹನು ರಾಜಸಿಂಹನೊಡನೆ “ರಾಜರು ಕುಳಿತುಕೊಳ್ಳುವುದಕ್ಕೆ ಎಲ್ಲಿ ಆಸನವನ್ನು ಮಾಡಿರುವೆ?” ಎಂದು ಕೇಳಿದನು.

ರಾಜಸಿಂಹನು ಶಿವಾಜಿಗೆ ಕೈಕೊಟ್ಟು ಬಾದಶಹನ ಬಲಗಡೆಯಲ್ಲಿದ್ದ ಸುವರ್ಣವೇದಿಕೆಯ ಮೂಲೆಯಲ್ಲಿ ಕುಳ್ಳಿರಿಸಿದನು. ಶಿವಾಜಿಯು ಫಕ್ಕನೆ ಅಸನದಿಂದ ಕೆಳಕ್ಕೆ ದುಮುಕಿ, “ನಮ್ಮ ಬಲಗಡೆಯಲ್ಲಿ ಇರುವವರು ಯಾರು?” ಎಂದು ಗಂಭೀರಧ್ವನಿಯಿಂದ ಕೇಳಿದನು.

ಬಲಗಡೆಯಯಿದ್ದ ರಜಪೂತ ಸರದಾರರೂ ಉಮ್ರಾಗಳೂ ಸಂದಿಗ್ಧ ಮಾನಸರಾಗಿ ನೋಡಿದರು. ಆದರೂ ಬಾದಶಹನು ಶಾಂತಚಿತ್ತನಾಗಿ ನೋಡುತಿದ್ದನು.

ಶಿವಾಜಿಯ ಪ್ರಶ್ನೆಗೆ ಉತ್ತರವಾಗಿ ರಾಜಸಿಂಹನು ತಮ್ಮ ಬಲಗಡೆಯಲ್ಲಿದ್ದವರು "ಮಾರವಾಡ ಸಂಸ್ಥಾನಾಧಿಪರಾದ ಯಶವಂತ ಸಿಂಹರು." ಎಂದು ಹುಸಿನಗುವಿರಿಂದ ಹೇಳಿದನು.

ಇದನ್ನು ಕೇಳಿದನೊ ಇಲ್ಲವೊ ಶಿವಾಜಿಯು ಕಿಡಿಕಿಡಿಯಾಗಿ ಉರಿದನು. ಅವಮಾನಶೂಲವನ್ನು ಮೈಯ್ಯೊಳಗೆ ತಿವಿದು ತಿರುಪಿದಂತೆ ಅವನು ಉದ್ರೇಕಿತನಾದನು. ಆದರೂ ಅವಮಾನ್ಯಜನ್ಯವಾದ ಕೋಪವನ್ನಾಗಲಿ ವ್ಯಥೆಯನ್ನಾಗಲಿ ಅವನು ತೋರಿಸಲಿಲ್ಲ. ಶಿವಾಜಿಯು ಗಂಭೀರ ಸ್ವರದಿಂದ ಯಶವಂಶಸಿಂಹನ ಸಹಪಂಜ್ತಿಯಲ್ಲಿ ಕುಳಿತುಕೊಳ್ಳಲು ನಮ್ಮಯೋಗ್ಯತೆಯು ಎಂತಹದು? ಸ್ವದೇಶವತ್ಸಲರಾದ, ಸ್ವಾತಂತ್ರ್ಯಪರಾಯಣರಾದ, ಸ್ವಧರ್ಮ ರಕ್ಷಕರಾದವರು ಯಾರಾದರೂ ಈ ಅಸ್ಥಾನದಲ್ಲಿ ಇದ್ದರೆ, ಆ ಬಡಪಾಪಿಗಳೊಡನೆ ಕೈಕಟ್ಟಿ ನಿಲ್ಲಲು ಯೋಗ್ಯರಲ್ಲದೆ, ಮೊಗಲ್ ಸಂಸ್ಥಾನದ ಜಹಗೀರುದಾರರೆಂಬ ದೊಡ್ಡ ದೊಡ್ಡ ಬಿರುದನ್ನು ತಾಳಿರುವ ಮಹಾ ರಜಪೂತರ ಬಳಿ ಸೇರುವುದಕ್ಕೆ ನಮ್ಮಲ್ಲಿ ಯೋಗ್ಯತೆ ಉಂಟೇ? ಯಶವಂತಸಿಂಹ ಮೊದಲಾದವರೊಳಗೆ ನಾವು ಒಬ್ಬರೆಂದು ತಿಳಿದಿರಬಹುದು. ಬಾದಶಹರು ಎಲ್ಲರಿಗೂ ಮಾನಮರ್ಯಾದೆಗಳನ್ನು ಕೊಟ್ಟರು. ಪ್ರತಿಯಾಗಿ ಹಿಂದುಗಳು ತಮ್ಮ ರಾಜಮರ್ಯಾದೆಗಳನ್ನು ಬಾದಶಹರಿಗೆ ಬಿಟ್ಟುಕೊಟ್ಟರು. ಈ ಗೌರವವು ಚಿತ್ತೂರಿನ ರಾಣಾವಿಗೂ ಮಹಾರಾಷ್ಟ್ರದ ಶಿವಾಜಿಗೂ ಬರಲಿಲ್ಲ. ಅಂತಹ ಗೌರವದ ಅಪೇಕ್ಷೆ ಇದ್ದಲ್ಲಿ ನಾವು ಈ ಯಶವಂತಸಿಂಹ, ರಾಮಸಿಂಹ, ಮೊದಲಾದವರೊಡನೆ ಕುಳಿತುಕೊಳ್ಳುವೆವು ಅಲ್ಲದೆ, ಪ್ರಕೃತದಲ್ಲಿ ಅಂತಹ ಬಹುಮಾನವನ್ನು ಆಶಿಸುವುದಿಲ್ಲ" ಎಂದನು.

ಬಾದಶಹನ ಪಕ್ಕದಲ್ಲಿದ್ದ ರಜಪೂತರೆಲ್ಲರೂ ಅಧೋವದನರಾದರು. ರಾಜಸಿಂಹನು ಮಾತನಾಡಲಾರದೆ ಮೋರೆ ತಗ್ಗಿಸಿ ನಿಂತನು. ಬಾದಶಹನು ಶಿವಾಜಿ ಆಡಿದ ಭಾಷೆಯ ಜ್ಞಾನಶೂನ್ಯನಾದರೂ, ಸಂದರ್ಭಾನುಸಾರದಿಂದ ಅದರ ಅರ್ಥವನ್ನು ತಿಳಿದು ರಾಜಸಿಂಹನೊಡನೆ "ಇದೇನು ಸಂಗತಿ" ಎಂದು ಕೇಳಿದನು.

ರಾಜಸಿಂಹನು ನತಶಿರಸ್ಕನಾಗಿ "ವನಸಿಂಹವು ಬೋನಿನಲ್ಲಿ ಸಿಕ್ಕಿಕೊಂಡಿದೆ" ಎಂದನು.

ಅವರಂಗಜೇಬನು ನಗುತ್ತ, "ಅದಕ್ಕೋಸ್ಕರ ಬೊಬ್ಬಿಡುತ್ತಿದೆಯೇ? ವನ್ಯಸ್ಥಿತಿಯಲ್ಲಿದ್ದಾಗ ಮೃಗಗಳನ್ನು ನೋಡುವುದು ಸರಿಯಲ್ಲ" ಎಂದನು.

ರಾಜಸಿಂಹನು "ಮೃಗವನ್ನು ಈಗ ನಾನು ಏನು ಮಾಡಲಿ?" ಎಂದು ಮೆಲ್ಲನೆ ಕೇಳಿದನು.

**ಅವರಂಗಜೇಬ**:—"ಅದನ್ನು ಕೊಂಡುಹೋಗಿ ಶಾಂತವಾದ ಬಳಿಕ ಮರಳಿ ತರಬಹುದಷ್ಟೆ."

ಈ ಸಂದರ್ಭದಲ್ಲಿ ಶಿವಾಜಿಯು ಅಲ್ಲಿ ನಿಲ್ಲಲಾರದೆ "ಆಮ್‌ಖಾಸ್ ಖಾನೆಯಿಂದ" ಹಿಂದೆರಳಿದ್ದನು. ಬಾದಶಹನಿಗೆ ನಮಸ್ಕಾರಮಾಡದೆ, ರಾಜಪುತ್ರರನ್ನು ಕಣ್ಣೆತ್ತಿ ನೋಡದೆ, ಅವನು ಹೋಗಿಬಿಟ್ಟನು. ಶಿವಾಜಿಯು ಅಕಸ್ಮಾತ್ತಾಗಿ ಅಲಕ್ಷವಾಗಿ ಅಸ್ಥಾನವನ್ನು ಬಿಟ್ಟುಹೋದುದನ್ನು ನೋಡುತ್ತಲೇ, ಅವರಂಗಜೇಬನ ಕೋಪಕ್ಕೆ ಪಾರವಿರಲಿಲ್ಲ. ಆದರೂ ಸ್ಥಿರಚಿತ್ತನಾಗಿದ್ದು, ಮೌನವಾಗಿದ್ದು ತನ್ನ ಮುಖಮುದ್ರೆಯನ್ನು ಬೇರೆ ಮಾಡಲಿಲ್ಲ. ಶಿವಾಜಿಯು ಹೋದ ಬಳಿಕ ಅವನ ಪರಿಜನರು ಅವನ ಹಿಂದೆಯೇ ನಡೆದು ಬಿಟ್ಟರು. ಅವರಂಗಜೇಬನು ರಾಜಸಿಂಹನ್ನು ಕರೆದು, "ಹೋದವರು ಎಲ್ಲಿ ತಾನೇ ಇಳಿಯುವರು?" ಎಂದು ಕೇಳಿದನು.

**ರಾಜಸಿಂಹ**:— "ಖಾವಂದರ ಅಪ್ಪಣೆಯಂತೆ ಅವರಿಗೋಸ್ಕರ ಕೋಟೆಯ ಒಳಗೆ ಮೊದಲೇ ಸಜ್ಜುಗೊಳಿಸಿದ್ದ "ದಿಲ್‌ಖುಷ್" ಮಂದಿರದಲ್ಲಿ ಇಳಿಸುವೆನು."

ಅವರಂಗಜೀಬನು "ಹಾಗಾದರೆ ನಡೆ! ನಡೆ! ವಿಳಂಬಿಸಬೇಡ! ಶಿವಾಜಿಯನ್ನು ಅಲ್ಲಿ ಇಳಿಸಿದ ಬಳಿಕ ನಮ್ಮನ್ನು ನೋಡಲು ನೀನು ಅರಮನೆಗೆ ಬರಬೇಕಾಗುವುದು. ರಾಜಕಾರ್ಯಗೌರವವು ಹೆಚ್ಚಿದೆ" ಎಂದು ಹೇಳಿ ಸುಮ್ಮನಾದನು.

ಶಿವಾಜಿಯು ಪೂರ್ವದ ಇಂದ್ರಪ್ರಸ್ಥದ ಸೌಭಾಗ್ಯವನ್ನೆಲ್ಲಾ ನೋಡುತ್ತ ಆರ್ಯಪುತ್ರರ ಆಸ್ಥಾನದಲ್ಲಿ ಮೊಗಲರು ಸ್ವೇಚ್ಛೆಯಿಂದ ರಾಜದಂಡವನ್ನು ಪರಿಪಾಲಿಸುವುದನ್ನು ಯೋಚಿಸುತ್ತ, ರಾಜಪುತ್ರರಿಗೂ ಹಿಂದುಗಳಿಗೂ ತಗಲಿದ ಹೀನಾವಸ್ಥೆಯನ್ನು ಕುರಿತು ದುಃಖಿಸುತ್ತ ಮೆಲ್ಲಮೆಲ್ಲನೆ ಹೋಗುತಿದ್ದನು. ರಾಜಸಿಂಹನು ತನ್ನ ಸಮೀಪಸ್ಥನಾದುದನ್ನು ನೋಡಿ ಶಿವಾಜಿಯು "ಬಾದಶಹನ ಎಂತಹನು? ನಮ್ಮನ್ನೂ ಯಶವಂತಸಿಂಹನನ್ನೂ ಒಂದು ಮಾಡಿದನಲ್ಲ!" ಎಂದು ಕೇಳಿದನು.

ರಾಮಸಿಂಹನು "ಅರಮನೆಯಲ್ಲಿದ್ದಾಗ ಅಲ್ಲಿನ ಪದ್ಧತಿಗನುಸಾರವಾಗಿ ನಡೆಯದೆ ಆಗಲಾರದು. ಅದು ಹೋಗಲಿ! ಈಗ ತಾವು ಸುರಕ್ಷಿತವಾಗಿ ತಮ್ಮ ಊರನ್ನು ಸೇರಿದರೆ ಸಾಕು! ನನ್ನ ಭಾರವನ್ನು ಇಳಿಸಿಕೊಂಡಂತಾಗುವುದು" ಎಂದು ದೈನ್ಯದಿಂದ ಬೇಡಿಕೊಂಡನು.

ಶಿವಾಜಿಯು ಈ ಮಾತುಗಳ ಸೂಕ್ಷ್ಮಾರ್ಥವನ್ನು ಗ್ರಹಿಸಿಕೊಂಡು, ತನಗೋಸ್ಕರ ಅಣಿಮಾಡಿದ್ದ ಮಂದಿರವನ್ನು ಸೇರಿದನು. ಈ ರೀತಿಯಾಗಿ ಕ್ರಿ. ಶಕೆಯ ೧೬೬೬ರಲ್ಲಿ ಶಿವಾಜಿಯು ಬಾದಶಹನಿಗೆ ಮೊತ್ತಮೊದಲು ಕೊಟ್ಟ ಸಂದರ್ಶನವು ಕಟ್ಟಕಡೆಯದಾಯಿತು.

ಯಾವ ದಿವಸದಲ್ಲಿ ಶಿವಾಜಿಯು ಅವರಂಗಜೇಬನ ಸಂದರ್ಶನಾರ್ಥವಾಗಿ ಹೋಗಿದ್ದನೋ ಆ ದಿವಸವೇ ಶೈಲಿನಿಯು ಕೋಟೆಯೊಳಗೆ ರಾಜಸಿಂಹನಿಗೋಸ್ಕರ

ಸಜ್ಜುಗೊಳಿಸಿದ್ದ ಮಂದಿರದ ಉಪ್ಪರಿಗೆಯನ್ನು ಏರಿದ್ದಳು. ಶಿವಾಜಿಯು ಶಿಬಿರವನ್ನು ಮುಟ್ಟಿದನು. ಬಾದಶಹನ ಆಜ್ಞಾನುಸಾರವಾಗಿ ರಾಜಸಿಂಹನು ಅರಮನೆಗೆ ಹಿಂದೆರಳಿದನು. ಆದರೂ ತೈಲಿನಿಯು ಮಹಡಿಯಿಂದ ಕೆಳಕ್ಕೆ ಇಳಿಯಲಿಲ್ಲ. ರಾತ್ರಿದೇವಿಯು ತನ್ನ ಭಯಾನಕ ರೂಪವನ್ನು ಧರಿಸಿ ಬರುವಾಗ ಒಂದೆರಡು ನಕ್ಷತ್ರಗಳು ಆಕಾಶದಲ್ಲಿ ಕಣ್ಣು ಮಿಟುಕಿಸುತ್ತಿದ್ದುವು. ಆದರೂ ಶೈಲಿನಿಯು ಅಲ್ಲಿಯೇ ನಿಂತಿದ್ದಳು. ತಂದೆಯು ಬಾದಶಹನನ್ನು ಬೀಳ್ಕೊಂಡು ಮರಳಿ ಬಂದನು. ರಾಜಸಿಂಹನು ಮಗಳನ್ನು ನೋಡುವುದಕ್ಕೆ ಮಹಡಿಯನ್ನು ಹತ್ತಿದನು. ಶೈಲಿನಿಯು ಸುಮ್ಮನೆ ನಿಂತಿರುವುದನ್ನು ಕಂಡು, “ಮಗು! ಇನ್ನೂ ನಿದ್ದೆ ಹೋಗಲಿಲ್ಲವೇಕೆ?” ಎಂದು ರಾಜಸಿಂಹನು ಕೇಳಿದನು.

**ಶೈಲಿನಿ**:—“ಅಪ್ಪಾ ನೀನು ಬರಲಿಲ್ಲವೆಂದು ಕಾದಿದ್ದೆನು.”

**ರಾಜಸಿಂಹ**:— “ಮುಆಜಮನು ನನ್ನ ಸಂಗಡ ಬರುವನೆಂದು ನೀನು ತಿಳಿದೆಯಾ?”

**ಶೈಲಿನಿ**: — “ಮು- ಆಜಮನು ಈ ಮನೆಗೆ ಏಕೆ ತಾನೇ ಬರುವನು? ಇದು ’ಶರಾಬ್‌ಖಾನೆ’ ಅಲ್ಲವಲ್ಲಾ!”

ರಾಜಸಿಂಹನು ಹುಬ್ಬುಗಂಟಿಕ್ಕಿ, “ಅಲ್ಲ! ಇದು ಶೈಲಿನಿ ಮಂದಿರ. ಇಲ್ಲಿಯೇ ಹೆಂಡತಿಯನ್ನು ನೋಡುವ ಹಾಗೆ ಅವನು ಬರಬೇಕೆಂದಿದ್ದನು.”

ಶೈಲಿನಿ ಪ್ರತಿಯಾಗಿ, “ಅಪ್ಪಾ! ಹೆಂಡ ತಿಂದುನೋಡುವುದಕ್ಕೆ ಇದು ’ಶರಾಬ್‌ಖಾನೆ’ ಅಲ್ಲವೆಂದೇ ನಾನು ಹೇಳಿದೆನು.”

**ರಾಜಸಿಂಹ**:- “ಅಮ್ಮಾ! ಉದ್ದುರುಂಟು ಮಾತಾಡಬೇಡ! ಸುಮ್ಮನೆ ಹಟಹಿಡಿದು ಹುಚ್ಚಳಾಗಬೇಡ, ಕಂಡೆಯಾ?”

**ಶೈಲಿನಿ**:— "ಅಪ್ಪಾ! ಹಟ ಹಿಡಿಯುವವರೆಲ್ಲರೂ ಹುಚ್ಚರಾದರೆ, ಲೋಕದಲ್ಲಿ ಬುದ್ಧಿವಂತರು ಯಾರು ತಾನೇ ಇರುವರು?"

**ರಾಜಸಿಂಹ**:— "ಮಗು! ನಾನು ನಿನ್ನ ಅರ್ಥವನ್ನೆಲ್ಲಾ ತಿಳಿದಿರುವೆನು. ಆದರೆ ಒಂದು ಮಾತನ್ನು ಮರೆಯಬೇಡ-ಮರಾಟರು ಶೂದ್ರರು".

**ಶೈಲಿನಿ**:— "ನಾನು ಅದಕ್ಕಿಂತಲೂ ಹೆಚ್ಚಾಗಿ ಬಲ್ಲೆನು. ಮುಸಲ್ಮಾನರು ಮ್ಲೇಚ್ಛರು".

ರಾಜಸಿಂಹನು ಉಚ್ಚಸ್ವರದಿಂದ "ಮಗು!, ಶೈಲಿನಿ! ನಾನು ನಿನ್ನನ್ನು ಯಾವಾಗ ಪ್ರತಾಪಗಡಕ್ಕೆ ಕೊಂಡುಹೋದೆನೋ ಅಂದಿರಿಂದ ನೀನು ಹೀಗೆ ವರ್ತಿಸಲು ತೊಡಗಿದೆ. ಈಗ ಯಾರನ್ನೂ ದೂಷಿಸಿ ಪ್ರಯೋಜನವಿಲ್ಲ. ನಿನ್ನ ಹಣೆಯಲ್ಲಿ ಬರೆದಂತಾಗುವುದು. ಈ ನಿನ್ನ ನಡತೆಯು ನಿನಗೆ ಹಿತಕರವಲ್ಲ. ನೀನು ಅನ್ಯರ ಹಸ್ತಗತಳಾಗಿ, ನಿನ್ನೊಡನೆ ನನ್ನನ್ನೂ ನಮ್ಮ ಕುಲವನ್ನೂ ಅಳಿಸಿ ಬಿಡುವುದಕ್ಕಿಂತಲೂ, ನಾನು ಹೇಳಿದಂತೆ ನಡೆದುಕೊಳ್ಳುವುದು ಒಳ್ಳೆಯದಲ್ಲವೇ? ಅವರಂಗಜೇಬನ ಬಂದಿಯಾದ ಶೂದ್ರ ಮರಾಟನ ಕಪಟಪ್ರೇಮಪಾಶದಲ್ಲಿ ನೀನು ಬಿದ್ದು ಸಾಯುವುದಕ್ಕಿಂತಲೂ ಸಾಕ್ಷಾತ್ ಭಾರತ ಬಾದಶಾಹಿಯ ಪುತ್ರನಾದ, ವಿಕ್ರಮಸಂಪನ್ನನಾದ ಮುಆಜಮನ ಯಥಾರ್ಥ ಪ್ರಣಯಭಾಜನೆಯಾಗಿ, ಭಾಗ್ಯಶಾಲಿನಿ ಎನಿಸಿಕೊಳ್ಳುವುದು ಲೇಸಲ್ಲವೇ! ತುಚ್ಛನಾದ ಆ ಮಾವಳಿಗನೆಲ್ಲಿ? ರಜಪೂತ ಕನ್ಯೆಯಾದ ಶೈಲಿನಿ ಎಲ್ಲಿ? ಕೆಲವು ದಿನಗಳಿಂದ ಈಚೆಗೆ ನಿನ್ನ ನಡತೆ ನನಗೆ ಅಸಹ್ಯವಾಗುತ್ತ ಬಂದಿದೆ. ಅನ್ನಾಹಾರಾದಿಗಳಲ್ಲಿ ಅಲಕ್ಷ್ಯ, ಮನೆಯವರ ಮೇಲೆ ಔದಾಸೀನ್ಯ, ನನ್ನೊಡನೆ ಅವಿಧೇಯತೆ, ಮುಆಜಮನ ವಿಷಯದಲ್ಲಿ ತಾತ್ಸಾರ, ನಿನ್ನ ಆತ್ಮಸಂಭಾಷಣೆ, ನಿನ್ನ ಅಂತರಂಗ ಪಲಾಯನ—ಇವೆಲ್ಲವು ವಿಪರೀತವನ್ನು ಸೂಚಿಸುತ್ತಿವೆ. ಬಾದಶಹರ ರಾಜಕಾರ್ಯಗೌರವ, ಶಿವಾಜಿಯ ಆಗಮನ ಮುಆಜಮನ ನಿರ್ಬಂಧ, ನಿನ್ನ ಹುಚ್ಚು ಹಟ—ಇವೆಲ್ಲವುಗಳಿಂದ ನನ್ನ ಬುದ್ಧಿಯು ಮುಂಗಾಣದು" ಎಂದು ಹೇಳಿದನು.

ಶೈಲಿನಿಯು ಈ ವಾಕ್ಯಪರಂಪರೆಯಿಂದ ಕದಲದೆ, "ಅಪ್ಪಾ! ಶಿವಾಜಿಯು ಅವರಂಗಜೇಬನ ಬಂದಿ ಎಂದು ನೀನು ಹೇಳಿದೆ. ಅವಮಾನ ಮಾಡಿದ್ದು ಸಾಲದೆ ಅವನನ್ನು ಮೋಸದಿಂದ ಬಂದಿಯಾಗಿ ಮಾಡಿದೆನೇ?" ಎಂದು ಕೇಳಿದಳು.

ರಾಜಸಿಂಹನು ಮೈದೆಗೆದು, "ಶಿವಾಜಿ ಬಂದಿಯಾಗಿರುವೆನಂದು ನಾನು ಹೇಳಿದೆನೇ? ನನ್ನ ಮನಸ್ಸು ಸರಿಯಾಗಿಲ್ಲ. ನಿದ್ದೆ ಗಣ್ಣುಗಳಿಂದ ಏನು ಹೇಳಿರುವೆನೆಂದು ಅರಿಯೆನು" ಎಂದು ಹೇಳಿ ಉಪ್ಪರಿಗೆಯಿಂದ ಇಳಿದುಹೋದನು.

ಶೈಲಿನಿಯು ತಂದೆಯ ಮಾತುಗಳನ್ನು ಮನಸ್ಸಿನಲ್ಲಿ ಮಥಿಸುತ್ತ, ಕುಳಿತಲ್ಲಿಯೇ ಗೋಡೆಗೆ ಒರಗಿ ನಿದ್ದೆಹೋದಳು.

ರಾಜಸಿಂಹನು ಎಚ್ಚರ ತಪ್ಪಿ ಹೇಳಿದಂತೆ, ಶಿವಾಜಿಯು ಡಿಲ್ಲಿಯಲ್ಲಿ ಸೆರೆಯಾಗಿದ್ದನು. ಶಿವಾಜಿಯು ತಪ್ಪಿಸಿಕೊಳ್ಳದಂತೆಯೂ, ರಾಜಪುತ್ರರೊಡನೆ ಒಳಸಂಚು ನಡೆಯಿಸದಂತೆಯೂ, ಅವರಂಗಜೀಬನು ಅವನ ಮೇಲೆ ಹೊಂಚು ಹಾಕಿದ್ದನು. ಆದರೆ ಈ ಪಹರೆಯಲ್ಲಿ ಶಿವಾಜಿಯ ಬಂಧನವು ಸೂಚಿತವಾಗಿರಲಿಲ್ಲ. ಆದರೂ ಶಿವಾಜಿಯು ಕೋಟೆಯನ್ನು ದಾಟುವುದಾದರೆ, ಅವರಂಗಜೀಬನ ಸೈನಿಕರ ಕತ್ತಿಗಳು ಒರೆಯಿಂದ ಹಾರಲು ಸಿದ್ಧವಾಗಿದ್ದುವು. ಮೂರು ದಿನಗಳಿಂದ ಮೊಗಲ ಸೈನಿಕರು ಆಯುಧಪಾಣಿಗಳಾಗಿ ಹಗಲಿರುಳು ತನ್ನ ಶಿಬಿರವನ್ನು ಬಿಡದೆ ಕಾಯುವುದನ್ನು ಶಿವಾಜಿಯು ತಿಳಿದುಕೊಂಡನು. ಆ ಮೈಗಾವಲಿನ ಅರ್ಥವನ್ನು ಶಿವಾಜಿಯು ತಿಳಿಯ ಹೋಗಲಿಲ್ಲ. ಈ ಸಂಕಷ್ಟಕರವಾದ ಸಮಸ್ಯೆಯಿಂದ ರಕ್ತಪಾತವಿಲ್ಲದೆ ಹೇಗೆ ಪಾರಾಗಬೇಕೆಂದು ಅವನು ಒಂದೆರಡು ದಿನ ತಾನೆ ವಿಚಾರಮಾಡಿದನು. ರಹಸ್ಯದಲ್ಲಿ ಪಲಾಯನ ಮಾಡುವುದಕ್ಕೆ ಅವನ ಬಳಿಯ ದಳವು ಅಧಿಕವಾಗಿತ್ತು; ಅವರನ್ನೆಲ್ಲಾ ಕಟ್ಟಿಕೊಂಡರೆ, ಪಲಾಯನದಲ್ಲಿ ಗುಟ್ಟು ನಿಲ್ಲಲಾರದು. ಬಹಿರಂಗ ಯುದ್ಧವನ್ನು ಮಾಡುವುದಕ್ಕೆ ದಳವು ಅಲ್ಪವಾಗಿತ್ತು; ಅಲ್ಪಸೇನೆಯನ್ನು ನಂಬಿ ಯುದ್ಧಮಾಡುವುದು ಹುಚ್ಚುತನವೆಂದು ಶಿವಾಜಿ ಎಣಿಸಿದನು.

ನಾಲ್ಕು ದಿನಗಳು ಕಳೆದುಹೋದುವು. ರಾಜಸಿಂಹನು, ದಿನಕ್ಕೆ ಅನೇಕಾವರ್ತಿ ಮರಾಟರ ಪಾಳೆಯಕ್ಕೆ ಬಂದು ಹೋಗಿ, ಶಿವಾಜಿಗೆ ಬೇಕು ಬೇಕಾದುದನ್ನು ಒದಗಿಸುತ್ತ, ಆತನು ಉಳುಕೊಂಡ ಮಂದಿರದ ವಿಷಯವಾಗಿ ಬಹಳ ಶ್ರಮಗೊಳ್ಳುತ್ತ, ಶಿವಾಜಿಯ ಮಹಾ ಹಿತಚಿಂತಕನೆಂದು ನಟಿಸುತ್ತ ಇರುವುದನ್ನು ಶಿವಾಜಿಯು ತಿಳಿದುಕೊಂಡನು. ಅದಕ್ಕೆ ತಕ್ಕುದಾದ ಪ್ರತಿಕಾರವನ್ನು ಮಾಡಲು ಉದ್ಯೋಗಿಸಿದನು. ಅವನ ಸರ್ವವ್ಯಾಪಕ ಬುದ್ಧಿಯ ಮುಂದೆ ಅವರಂಗಜೇಬನ ಪ್ರಯತ್ನಗಳೂ ರಾಜಸಿಂಹನ ಕಾರ್ಯಗಳೂ ಕುಂಠಿತವಾದುವು. ಈ ಸಂದರ್ಭದಲ್ಲಿ ಶಿವಾಜಿಯ ಕುಲದೇವತೆಯಾದ ಭವಾನಿಯು ಅವನ ಮೈಮೇಲೆ ಬಂದು "ಶಿವಾ! ಹೆದರ ಬೇಡ! ಯಾವಾತನು ಜನನೀಜನ್ಮಭೂಮಿಯನ್ನು ಪ್ರೀತಿಸಿ, ಅದನ್ನು ಉದ್ಧಾರಮಾಡಲು ಪ್ರಯತ್ನಿಸುವನೋ, ಅವನು ನನ್ನ ಭಕ್ತನು, ಭಕ್ತರಲ್ಲಿ ಭಕ್ತನು. ಅವನಿಗೆ ಯಾವುದೊಂದು ಆಪತ್ತು ತಗಲಲಾರದು. ಅಂತಹನನ್ನು ಹಾಳುಮಾಡಲು ಬಗೆದವರು ಆ ದೇಶವತ್ಸಲನ ವೈಭವ ಪ್ರಾಭವವನ್ನು ನೋಡುವುದಕ್ಕೆ ಉಳಿಯದೆ, ನರಕಕ್ಕೆ ಇಳಿದು ಹೋಗುವರು. ನೀನು ಭಯ ಪಡಬೇಡ! ನಿನ್ನ ಕೋರಿಕೆಗಳೆಲ್ಲವು ಸಿದ್ಧಿಸುವುವು" ಎಂದು ಹೇಳಿದಳು.

ಇದಾದ ಎರಡು ದಿನಗಳ ಬಳಿಕ ಶಿವಾಜಿಯು ರಾಜಸಿಂಹನನ್ನು ಕರೆಯಿಸಿ "ನಮ್ಮ ಸೈನಿಕರೆಲ್ಲರು ಮಾರ್ಗಾಯಾಸದಿಂದ ಮೊದಲೇ ಬಳಲಿದ್ದರು. ಇಲ್ಲಿನ ಹವೆಯು ನಮಗೆ ಹಿತಕರವಾಗುವುದಿಲ್ಲ. ಹಾಗೂ ನೀರೂ ಗಾಳಿಯೂ ನಮ್ಮೆಲ್ಲರ ಆರೋಗ್ಯವನ್ನು ಕೆಡಿಸಿರುವುವು. ಏನಾದರೂ ಪ್ರಮಾದ ಸಂಭವಿಸಿದರೆ, ನಾವು ಡಿಲ್ಲಿಗೆ ಬಂದುದೇ ಅಯೋಗ್ಯವಾಯಿತು ಎಂದು ತಿಳಿಯಬೇಕಾಗುವುದು. ನಮ್ಮ ಸೈನಿಕರೆಲ್ಲರು ನಮ್ಮ ದೇಹವನ್ನು ನೆರಳಿನಂತೆ ಹಿಂಬಾಲಿಸುವರು. ಆದರೂ ಅವರನ್ನೆಲ್ಲ ಊರಿಗೆ ಕಳುಹಿಸದೆ ನಿರ್ವಾಹವಿಲ್ಲ. ನಾವು ಅವರನ್ನೆಲ್ಲ ಹಿಂದಕ್ಕೆ ಕಳುಹಿಸಬೇಕೆಂದು ನಿಶ್ಚೈಸಿರುವೆವು. ಅವರಿಗೆ ಬಾದಶಹರ ಹೆಸರಿನಲ್ಲಿ 'ರಹದಾರಿಗಳನ್ನು' ಕೊಡಿಸಬೇಕಾಗಿ ಅಪೇಕ್ಷಿಸುತ್ತೇವೆ" ಎಂದು ಹೇಳಿದನು. ರಾಜಸಿಂಹನು ಬಾದಶಹನಿಗೆ ಶಿವಾಜಿಯ ಪ್ರಾರ್ಥನೆಯನ್ನು ಅರಿಕೆಮಾಡಿದನು. ಅವರಂಗಜೇಬನು ಆ ಪ್ರಾಸ್ತಾಪಕ್ಕೆ ಒಪ್ಪಿದನು.

ಶಿವಾಜಿಯ ಆಪ್ತ ಅನುಚರರಲ್ಲದೆ ಮಿಕ್ಕವರೆಲ್ಲರು ಯಜಮಾನನ ನಿರ್ಬಂಧದಿಂದ ಊರಿಗೆ ಮರಳಿದರು.

ಸೈನಿಕರೆಲ್ಲರು ಹಿಂದೆರಳಿದ ಬಳಿಕ ಶಿವಾಜಿಯು ಮೈಯಲ್ಲಿ ಸ್ವಸ್ಥವಿಲ್ಲವೆಂದು ಹಾಸಿಗೆ ಹಿಡಿದು ಮಲಗಿದನು. ಶಿವಾಜಿಯ ಅಸುಸ್ಥತೆಯ ಸುದ್ದಿಯು ಡಿಲ್ಲಿಯಲ್ಲೆಲ್ಲಾ ಹಬ್ಬಿತು ಜನರು ಶಿವಾಜಿಯನ್ನು ನೋಡುವುದಕ್ಕೆ ಗುಂಪು ಗುಂಪಾಗಿ ಶಿಬಿರಕ್ಕೆ ಬಂದರು. ಯಾರನ್ನೂ ಮನೆಯೊಳಕ್ಕೆ ಬಿಡದಂತೆ ಶಿವಾಜಿಯು ಆಜ್ಞೆಮಾಡಿದ್ದನು. ರಾಜಸಿಂಹನಿಗೂ ಮುಆಜಮನಿಗೂ ಹೊರತು ಮಿಕ್ಕವರಿಗೆ ಶಿವಾಜಿಯನ್ನು ನೋಡುವುದಕ್ಕೆ ಅಪ್ಪಣೆಯಿರಲಿಲ್ಲ. ಇವರಿಬ್ಬರು ಸಹ ಶಿವಾಜಿಯು ನಿಜವಾಗಿ ಅಸ್ವಸ್ಥನಾಗಿರುವನೋ ಇಲ್ಲವೊ ಎಂದು ಸರಿಯಾಗಿ ತಿಳಿಯದೆಹೋದರು. ಶಿವಾಜಿಯ ಅಸ್ವಸ್ಥದಿಂದ ಎಲ್ಲರೂ ದುಃಖಿತರಾದರು. ಶಿವಾಜಿಯ ಕ್ಷೇಮವನ್ನು ಎಲ್ಲರೂ ವಿಚಾರಿಸುತ್ತಿದ್ದರು. ಶೈಲಿನಿಯು ತನ್ನ ತಂದೆಯು ಮನೆಗೆ ಬಂದಕೂಡಲೇ ಅದೇ ಪ್ರಶ್ನೆಯನ್ನು ಮಾಡುವಳು. ಶಿವಾಜಿಯು ಹೇಗಿರುವನೆಂದು ನೋಡುವದಕ್ಕೆ ಅವಳ ಪ್ರಾಣವು ತುಡಿದುಕೊಳ್ಳುತ್ತಲಿತ್ತು. ಗುಪ್ತವೇಷದಿಂದ ಅವನಿದ್ದಲ್ಲಿಗೆ ಹೋಗುವೆನೆಂದು ಒಂದು ಸಲ ಯೋಚಿಸಿದಳು. ಒಡನೆ ತನ್ನನ್ನು ಯಾರಾದರೂ ಗುರುತಿಸಿದರೆ, ತನ್ನ ಅವಸ್ಥೆಯೂ ಅನ್ಯರ ಅವಸ್ಥೆಯೂ ಏನಾಗುವುದೆಂದು ಚಿಂತಿಸಿದಳು. ಅಸ್ವಸ್ಥವು ಸ್ವಲ್ಪ ಗುಣವಾದಂತೆ ಸುದ್ದಿ ಎದ್ದಿತು. ತಾನು ಕ್ಷೇಮವನ್ನು ಹೊಂದಿದುದಕ್ಕೆ, ಶಿವಾಜಿಯು ಪ್ರತಿ ಬೃಹಸ್ಪತಿವಾರ ಗುರುಪೂಜೆಯನ್ನು ಮಾಡಲಾರಂಭಿಸಿದನು. ಪ್ರತಿ ಗುರುವಾರ ಹಗಲು ಮಹೋತ್ಸವದಿಂದ ಪೂಜೆಯನ್ನೂ ರಾತ್ರಿ ಭಗವನ್ನಾಮ ಸಂಕೀರ್ತನವನ್ನೂ ಮಾಡಿ, ದೇವರಿಗೆ ನಿವೇದನ ಮಾಡಿದ ಭಕ್ಷ್ಯಾದಿಗಳನ್ನು ದೊಡ್ಡ ದೊಡ್ಡ ಬಿದಿರ ಬುಟ್ಟಿಗಳಲ್ಲಿ ತುಂಬಿ, ಬ್ರಾಹ್ಮಣರಿಗೂ, ಮುಖ್ಯಮುಖ್ಯರಾದ ಅಧಿಕಾರಿಗಳಿಗೂ ಬೈರಾಗಿಗಳಿಗೂ, ಫಕೀರರಿಗೂ, ಹಂಚುನಂತೆ ಅಜ್ಞೆಮಾಡಿದನು. ಮೊದಲು ಮೊದಲು ಕಾವಲುಗಾರರು ಬುಟ್ಟಿಗಳನ್ನು ಶೋಧಿಸದೆ ಬಿಡುತ್ತಿರಲಿಲ್ಲ, ಪ್ರತಿ ಗುರುವಾರವೂ ಈ ರೀತಿಯಾಗಿ ಭಕ್ಷ್ಯದ ಬುಟ್ಟಿಗಳು ಹೋಗಲಾರಂಭಿಸಿದಂತೆ, ಮೊಗಲ್ ಕಾವಲುಗಾರರು ತಮ್ಮ ತಮ್ಮ ಕಾರ್ಯದಲ್ಲಿ

ಉದಾಸೀನರಾಗಿ, ಪರೀಕ್ಷೆ ಮಾಡದೆಯೇ ಬುಟ್ಟಿಗಳನ್ನು ಬಿಡುತ್ತಬಂದರು. ಶಿವಾಜಿಯು ಗುಣಹೊಂದುತ್ತ ಬರುವಷ್ಟಕ್ಕೆ ಈ ಪೂಜೆಯು ಮಹಾವೈಭವದಿಂದ ನಡೆಯ ತೊಡಗಿತು. ಈ ವೈಭವವು ಹೆಚ್ಚಿದಷ್ಟಕ್ಕೆ ಕಾವಲುಗಾರರ ಕಾರ್ಯಗಳು ಸಡಿಲವಾಗುತ್ತ ಬಂದವು. ಶಿವಾಜಿಯು ಯಾವ ಉಪಾಯಗಳಿಂದ ತನ್ನ ಉದ್ದೇಶವನ್ನು ಕೊನೆಗಾಣಿಸಬೇಕೆಂದಿದ್ದನೋ ಅವೇ ಉಪಾಯಗಳು ಫಲಿಸುವುದಕ್ಕೆ ಅನುಕೂಲವಾಗಿ ಸಮಯವು ಬಂದೊದಗಿತು.

ಅವರಂಗಜೇಬನು ಶಿವಾಜಿಯ ಪೂಜಾಕೃತ್ಯಗಳನ್ನು ನೋಡಿ ಮಾಯಾವಿಯಾದ ಶಿವಾಜಿಯು ಅವುಗಳನ್ನು ಏಕೆ ನಡೆಯಿಸುವನೆಂದು ರಾಜಸಿಂಹನೊಡನೆ ವಿಚಾರಿಸಿದನು. ರಾಜಸಿಂಹನು ಅವುಗಳಿಂದ ಮೋಸವೇನೂ ನಡೆಯಲಾರದೆಂದು ಬಾದಶಹನಿಗೆ ಭರವಸೆಯಿತ್ತನು. ಸಂದೇಹಗ್ರಸ್ತನಾದ ಬಾದಶಹಸಿಗೆ ಈ ಉತ್ತರವು ಸಮರ್ಪಕವಾಗಲಿಲ್ಲ. ಶಿವಾಜಿಯ ಮೇಲಿನ ಕಾವಲನ್ನು ಬಿಗಿಮಾಡುವಂತೆ, ಅವನು ತನ್ನ ಸೈನಿಕರಿಗೆ ಆಜ್ಞೆ ಮಾಡಿದನು. ಹಾಗೂ ತಾವು ಯೋಚಿಸಿದ ಕಾರ್ಯವನ್ನು ಬೇಗನೆ ನೆರವೇರಿಸಬೇಕೆಂದು ರಾಜಸಿಂಹನಿಗೆ ಸೂಚಿಸಿದನು. ಎಂದಿನಂತೆ ಬೃಹಸ್ಪತಿವಾರವು ಬಂದಿತು. ಪೂಜೆಯು ಸ್ವಲ್ಪ ವಿಳಂಬವಾಗಿ ನಡೆಯಿತು. ರಾತ್ರಿ ೪ ಗಳಿಗೆಯಾಯಿತು. ಭಿಕ್ಷುಕರೂ, ಬಡವರೂ, 'ಪೀರರೂ', ಫಕೀರರೂ ಶಿವಾಜಿಯ ಶಿಬಿರವನ್ನು ಮುತ್ತಿಕೊಂಡಿದ್ದರು. ಎಂದಿನಂತೆ ಭಕ್ಷ್ಯಭೋಜ್ಯಗಳನ್ನು ಎಲ್ಲರಿಗೂ ಹಂಚಿದರು. ಬ್ರಾಹ್ಮಣರು ದಕ್ಷಿಣೆಗಳಿಂದ ಸಂತೃಪ್ತರಾಗಿ ಶಿವಾಜಿಯನ್ನು ಹರಸಿ ಹೋದರು. ನೂರಾರು ಬುಟ್ಟಿಗಳನ್ನು ಧರಿಸಿ, ಅನಾಥರೂ ಅಶನಾರ್ಥಿಗಳೂ ಕೋಟೆಯ ಮಾರ್ಗವಾಗಿ ನಡೆದರು. ಇವರ ನಡುವಿನಲ್ಲಿ "ಭೀಮಕಾಯರಾದ ಇಬ್ಬರು ಮಾವಾಳಿಗಳು ಎರಡು ಬುಟ್ಟಿಗಳನ್ನು ಕಲೆಯ ಮೇಲೆ ಹೊತ್ತುಕೊಂಡು, ಮನೆಯಿಂದ ಹೊರಟು, ಡಿಲ್ಲಿಯಿಂದಾಚೆಗೆ" ನುಸುಳಿ ಬಿಟ್ಟರು. ಮುಸಲ್ಮಾನ್ ಕಾವಲುಗಾರರು ತಮಗೆ ಸಿಕ್ಕಿದ ಖಾದ್ಯಪದಾರ್ಥಗಳ ವಿಚಾರದಲ್ಲಿ ಮಗ್ನರಾಗಿದ್ದುದರಿಂದ, ಬರುವವರ ಹೋಗುವವರ ಬುಟ್ಟಿಗಳನ್ನು ಪರೀಕ್ಷಿಸಿ ನೋಡದೆ,

ತಲೆಯ ಮೇಲೆ ಬುಟ್ಟಿ ಹೊತ್ತವರನ್ನು ಹೊರಕ್ಕೆ ಹೋಗಬಿಟ್ಟರು. ಕತ್ತಲು ಬಲವಾಗುತ್ತ ಬಂದಿತು. ಕೋಟೆಯ ಹೊರಕ್ಕೆ ಹೋಗುವವರೆಲ್ಲರೂ ಅವಸರಗೊಂಡರು. ಪಹರೇಯವರು ರಾತ್ರಿಯಾಯಿತೆಂದು ಕೋಟೆಯ ಹೆಬ್ಬಾಗಿಲನ್ನು ಮುಚ್ಚಿಬಿಟ್ಟರು. ಇದುವರೆಗೆ ಅಂಬೋಧಿಯಂತೆ ಕಲಕಲಮಯವಾವ ಶಿಬಿರವು ನಿರ್ಜನವಾದ ಕಾಂತಾರದಂತೆ ನಿಶ್ಶಬ್ದವಾಯಿತು.

ಕೃಷ್ಣಪಕ್ಷದ ಕಾಳಿಮೆಯ ರಾತ್ರಿ, ಆಕಾಶದಿಂದ ಸುರಿವ ತಿಮಿರಧಾರೆಯಲ್ಲಿ ಡಿಲ್ಲಿ ನಗರವು ನನೆದು ಹೋಗಿ ಮಸುಕಾಗಿ ತೋರುತ್ತಲಿತ್ತು. ಬಾದಶಹನ ಅರಮನೆಯಿಂದ ಒಬ್ಬ ಯುವಕನು ಹೊರಕ್ಕೆ ಬಂದನು. ಪಹರೇಯವನು ಕೈಯಲ್ಲಿದ್ದ ಆಯುಧವನ್ನು ಎತ್ತಿತೋರಿಸಿ, ರಾಜದ್ವಾರವನ್ನು ತೆರೆದುಬಿಟ್ಟನು. ಯುವಕನು ರಾಜಮಾರ್ಗಕ್ಕೆ ಇಳಿದನು. ಅವನ ಹಿಂದುಗಡೆಯಲ್ಲಿಯೇ ರಾಜದ್ವಾರವು ಕಣಕಣ ಶಬ್ದದಿಂದ ಮುಚ್ಚಲ್ಪಟ್ಟಿತು. ಯುವಕನು ಬಾದಶಹನ ಜ್ಯೇಷ್ಠಪುತ್ರನಾದ ಮುಆಜಮ್ ಆಗಿದ್ದನು. ಶಿವಾಜಿಯು ಪೂಜೆಯ ನೆವದಿಂದ ಹಂಚುತ್ತಲಿದ್ದ ಬುಟ್ಟಿಗಳನ್ನು ಪುನಃ ಪರೀಕ್ಷಿಸಬೇಕೆಂದು ಮುಆಜಮನು ಸಾಯಂ ಕಾಲದಲ್ಲಿಯೇ ಆಜ್ಞಪ್ತನಾಗಿದ್ದನು. ತಂದೆಯ ಈ ಆಜ್ಞೆಯನ್ನು ಶಿರಸಾವಹಿಸುವುದು ಯುವಕನಿಗೆ ಅಸಾಧ್ಯವಾಗಿತ್ತು. ಅದಕ್ಕೆ ಕಾರಣವೊಂದಿತ್ತು. ಸುರಾದೇವಿಯು ಈತನ ಶಿರಸ್ಸಿನಲ್ಲಿ ಆವಿರ್ಭವಿಸಿದ್ದುದರಿಂದ, ಪಿತೃವಿನ ಆಜ್ಞೆಗೆ ಅಲ್ಲಿ ಸ್ಥಳವಿರಲಿಲ್ಲ. ಬಾದಶಹನ ಆಜ್ಞೆಯನ್ನು ಮನಃಪೂರ್ವಕವಾಗಿ ಈ ಸತ್ಪುತ್ರನು ಪಾಲಿಸಿದ್ದರೆ, ಭಾರತವರ್ಷದ ಇತಿಹಾಸವು ಬೇರೊಂದು ರೂಪವನ್ನು ಹೊಂದುತಿತ್ತು. ಮುಆಜಮನು ನೆಟ್ಟನೆ ಶಿವಾಜಿಯ ಶಿಬಿರದ ಕಡೆಗೆ ನಡೆಯುವ ಬದಲಾಗಿ—ತೆರೆಮಸಗಿದ ಕಡಲಿನಲ್ಲಿ ಚುಕ್ಕಾಣಿ ಇಲ್ಲದ ನಾವೆಯಂತೆ—ಕಂಡಕಡೆಗೆ ಅಲೆದನು. ಕೊನೆಗೆ ಈ ನಾವೆಯು ರಾಜಸಿಂಹನ ಮಂದಿರದ ಬಳಿಯಲ್ಲಿ ಬಂದು ನಿಂತಿತು. ರಾಜಸಿಂಹನನ್ನು ಈಗ ತಾನೇ ಅರಮನೆಯಲ್ಲಿ ಸ್ವತಃ ನೋಡಿದ್ದರೂ, ಮುಆಜಮನು ಅವನನ್ನು ಕುರಿತು ಮನೆಯೊಳಕ್ಕೆ ವಿಚಾರಿಸಿದನು. ರಾಜಸಿಂಹನು ಮನೆಯಲ್ಲಿ ಇಲ್ಲದಿದ್ದರೂ ಒಳಹೋಗುವುದಕ್ಕೂ, ಶೈಲಿನಿಯೊಡನೆ

ಮಾತುಕಥೆಯಾಡುವುದಕ್ಕೂ, ಮುಆಜಮನು ಸಂಪೂರ್ಣ ಅಧಿಕಾರವನ್ನು ಪಡೆದಿದ್ದನು. ಮುಆಜಮನು ಅನೇಕ ಸಲ ಶೈಲಿನಿಯ ಚಿಕ್ಕ ಮನೆಗೆ ಬಂದು ಹೋಗುತ್ತಿದ್ದನು. ಶೈಲಿನಿಯ ಪ್ರಣಯವನ್ನು ಸಾಧಿಸುವುದಕ್ಕೆ ನಾನಾ ಉಪಾಯಗಳನ್ನು ಮಾಡಿದ್ದನು. ಒಂದು ಸಲನೂರಾರು ಸುರಾಪೂರಿತ ಸೀಸೆಗಳನ್ನು ತರಿಸಿಕೊಂಡು ಬಂದನು. ಶೈಲಿನಿಯು ಪ್ರಸನ್ನಳಾಗದೆ ಸುರೆಯನ್ನು ತಂದವನೊಡನೆ, “ಇವುಗಳು ನಮ್ಮಲ್ಲಿ ಬಿಕರಿಯಾಗವು. ಅವಕ್ಕೆ ಬಾದಶಹನ ಅಂತಃಪುರದಲ್ಲಿ ಬೆಲೆ ಬರುವುದು” ಎಂದು ಮುಆಜಮನು ಕೇಳುವಂತೆ ಹೇಳಿ ನಡೆದುಬಿಟ್ಟಳು. ಮುಆಜಮನು ಸಿಟ್ಟುಗೊಂಡು ತನ್ನ ಪರಾಕ್ರಮವನ್ನು ತೋರಿಸುವುದಕ್ಕೆ ಮತ್ತಾವುದನ್ನೂ ಕಾಣದೆ. ಸೇಸೆಗಳ ಕೊರಲುಗಳನ್ನು ಮುರಿದು, ಕೆನ್ನೀರನ್ನು ಪಾನಮಾಡಿಬಿಟ್ಟನು. ಇನ್ನೊಮ್ಮೆ ಮುಆಜಮನು ಸ್ವತಃ ಹೋಗದೆ ತನ್ನದೊಂದು ತಸಬೀರನ್ನೂ ಪ್ರಣಯ ಪತ್ರಿಕೆಯನ್ನೂ ಕಳುಹಿಸಿದನು. ಶೈಲಿನಿಯು ಪ್ರತಿಯಾಗಿ “ನಿನ್ನ ಪ್ರಣಯ ಪಾತ್ರಳ ತಸಬೀರು ಇಲ್ಲದೆ ಇದ್ದುದರಿಂದ, ಅದರ ಮಾತೃಕೆಯನ್ನು (original copy) ಕಳುಹಿಸಿರುವೆನು” ಎಂದು ಪತ್ರ ಬರೆದು ಸಿಪಾಯಿಯ ಒಡನೆ ಒಂದು ದೊಡ್ಡ ವಾನರಿಯನ್ನು ಕಳುಹಿಸಿದಳು. ಮತ್ತೊಮ್ಮೆ ಮುಆಜಮನು ಶಿವಾಜಿಯ ವೇಷವನ್ನು ಅಳವಡಿಸಿಕೊಂಡು, ಶೈಲಿನಿಯ ಮಂದಿರಕ್ಕೆ ಹೋದನು. ಶೈಲಿನಿಯು ಬಂದವನನ್ನು ಕುಳ್ಳಿರಿಸಿ, “ಸಿಂಹ-ಚರ್ಮದಲ್ಲಿ ಕತ್ತೆ” ಎಂಬ ಪಾರಸೀ ಕಥೆಯೆನ್ನು ಅವನಿಗೆ ಓದಲು ಕೊಟ್ಟು, ತನ್ನ ದಾಸಿಯನ್ನು ಕರೆದು, ಬಂದವನನ್ನು ಸತ್ಕರಿಸೆಂದು ಹೇಳಿ ಹೋಗಿ ಬಿಟ್ಟಳು. ಶೈಲಿನಿಯ ತಿರಸ್ಕಾರವನ್ನು ಮುಆಜಮನು ರಾಜಸಿಂಹನಿಗೆ ತಿಳಿಸಿದ್ದರು. ಹಾಗೂ ಶಿವಾಜಿಯನ್ನು ಪ್ರೀತಿಸಿ, ಗುಪ್ತವೇಷದಿಂದ ಮರಾಟರ ಶಿಬಿರಕ್ಕೆ ಹೋಗುತ್ತಿದ್ದಳೆಂದು ಹೇಳಿದ್ದನು. ರಾಜಸಿಂಹನು ಕೋಪಾವಿಷ್ಟನಾಗಿ ಮಗಳನ್ನು ಅವಳ ಚಿಕ್ಕಮನೆಯಲ್ಲಿ ಮುಚ್ಚಿಟ್ಟನು. ಮಹಡಿಯ ಬಳಿಯಲ್ಲಿ ಬೆಳೆದಿದ್ದ ಮರವನ್ನು ಕಡಿದು ಹಾಕಿಸಿದನು. ಶೈಲಿನಿಯ ಸೆರೆಮನೆಯನ್ನು ಒಳಹೋಗಲು ಮುಆಜಮನಿಗಲ್ಲದೆ ಮತ್ತಾರಿಗಾದರೂ ಅಪ್ಪಣೆಯಿರಲಿಲ್ಲ. ಶೈಲಿನಿಯು ಇದುವರೆಗೆ ತನಗೆ ತೋರಿಸಿದೆ ಅಲಕ್ಷ್ಯಭಾವಕ್ಕೂ ಹಾಸ್ಯಕರವಾದ ಆಚರಣೆಗೂ

ತಕ್ಕದಾದ ಶಾಸ್ತಿಯನ್ನು ಮಾಡಬೇಕೆಂದು, ಮುಆಜಮನು ಈ ರಾತ್ರಿ ಶೈಲಿನಿ ಇದ್ದಲ್ಲಿಗೆ ಬಂದಿದ್ದನು.

ಮುಆಜಮನು ಉಪ್ಪರಿಗೆಯನ್ನು ಹತ್ತಿ, ಶೈಲಿನಿಯ ಮಂದಿರದ ಬಾಗಿಲನ್ನು ತೆರೆದು, ಒಳಕ್ಕೆ ಕಾಲಿಟ್ಟನು. ಅಚ್ಚರಿಗೊಂಡ ಕಣ್ಣುಗಳಿಂದ ಬಾಯಿಬಿಟ್ಟು ಅಪ್ರತಿಭನಾಗಿ ಅಲ್ಲಿಯೇ ನಿಂತು ನೋಡಿದನು. ಶೈಲಿನಿಯು ಓಡಿಹೋಗಿದ್ದಳು. ದುರ್ಜನರ ಅಶುದ್ಧಾಚರಣೆಯಿಂದ ಹಾಳಾದ ಊರಿಂದ ಪುರದೇವತೆಯು ತೊಲಗುವಂತೆ ಶೈಲಿನಿಯು ತನ್ನ ಮನೆಯಿಂದ ಓಡಿಹೋಗಿದ್ದಳು. ಕಣ್ಣೆರೆದು ಎಲ್ಲಾ ಕಡೆಗಳಲ್ಲಿ ನೋಡಿದನು. ದೀಪವನ್ನು ಕೈಯಲ್ಲಿ ಕೊಂಡು ಕೊಟ್ಟಡಿಯನ್ನೆಲ್ಲಾ ಹುಡುಕಿದನು. ಶೈಲಿನಿಯು ಅಲ್ಲಿಂದ ಮಾಯವಾಗಿದ್ದಳು. ಉನ್ನತವಾದ ಉಪ್ಪರಿಗೆಯಲ್ಲಿ ಬಂಧಿತಳಾದಳು ಅಲ್ಲಿಂದ ಹೇಗೆ ಜಾರಿಹೋದಳೆಂದು ನೋಡುವುದಕ್ಕೆ ಮುಆಜಮನು ಪ್ರಯಾಸಪಟ್ಟನು. ಶೈಲಿನಿಯು ಎರಡು ಪಟ್ಟೆಯ ಸೀರೆಗಳನ್ನು ಜೋಡಾಗಿ ಬಿಗಿದು, ಒಂದು ಕೊನೆಯನ್ನು ಕೊಟ್ಟಡಿಯ ತೊಲೆಗೆ ಸುತ್ತಿ, ಮತ್ತೊಂದನ್ನು ಕಿಟಿಕಿಯಿಂದ ಕೆಳಗೆ ಇಳಿಬಿಟ್ಟು, ಅದರ ಸಹಾಯದಿಂದ ಕೆಳಕ್ಕೆ ಇಳಿದು, ಎಲ್ಲಿಯೋ ಪಲಾಯನ ಮಾಡಿದಳು ಎಂದು ಮುಆಜಮನು ನಿಶ್ಚಯ ಮಾಡಿದನು. ಇನ್ನೂ ಕಾಲ ಕಳೆದರೆ ಕಾರ್ಯವು ಕೆಟ್ಟು ಹೋಗುವುದೆಂದು ತಿಳಿದು, ಅವಳನ್ನು ಹುಡುಕುವುದಕ್ಕೆ ಯೋಚಿಸಿದನು. ಶೈಲಿನಿಯು ಮರಾಟರ ಶಿಬಿರಕ್ಕೆ ಓಡಿ ಹೋಗಿರಬಹುದೆಂದು ಅವನು ನಿಶ್ಚೈಸಲಿಕ್ಕೆ ಕಾರಣವಿದ್ದಿತು. ಆದುದರಿಂದ ಅವಳನ್ನು ಹಿಡಿದು ತಂದು, ಅವಳ ತಂದೆಯ ವಶದಲ್ಲಿ ಕೊಟ್ಟು ಅವಳು ಮಾಡಿದ ದುಷ್ಕಾರ್ಯವನ್ನು ಅವಳ ಮುಖಕ್ಕೆ ಇಟ್ಟು, ತನ್ನ ಪರಾಕ್ರಮವನ್ನು ತೋರಿಸಬೇಕೆಂದು ನಿರ್ಧರಿಸಿ ಕೆಳಕ್ಕೆ ಇಳಿದನು. “ಅಂದು ನಾನು ಕಾಲಿಗೆ ಎರಗಿದಾಗ ನನ್ನನ್ನು ಎಡವಿ ಒದೆದುಬಿಟ್ಟಳು. ತಾಯಿತಂದೆಗಳಿಗೆ ನಮಸ್ಕರಿಸದ ನನ್ನ ಪವಿತ್ರ ಮಸ್ತಕವನ್ನು ಈ ಮೂಳಿಯು ಚೆಂಡಾಡಿದಂತೆ ಒದೆದುಬಿಟ್ಟಳು. ಈ 'ಹರಾಮ್ ಖೋರಿಯನ್ನು' ಮೂಗುದಾರ ಹಿಡಿದು, ಹಟ್ಟಿಗೆ ಒಯ್ಯದೆ ಬಿಡೆನು.” ಎಂದು ಮನಸ್ಸಿನಲ್ಲಿಯೇ ಅನ್ನುತ್ತ, ಮುಆಜಮನು ಮಾರ್ಗಕ್ಕೆ ಬಂದನು.

ರಾತ್ರಿ ೧೦ ಗಳಿಗೆ ಕಳೆಯಿತು. ಪೃಥ್ವಿಗೆ ಗಾಢಾಂಧಕಾರದ ಆವರಣವು ಸುತ್ತಿತು. ಶ್ರಾಂತವಾದ ಡಿಲ್ಲಿ ನಗರವು ಪ್ರಕೃತಿಯ ಸುಷುಪ್ತಿಯಲ್ಲಿ ಸ್ವಪ್ನಮಯವಾಗಿತ್ತು. ಮಾರ್ಗಗಳಲ್ಲೆಲ್ಲಾ ನಿರ್ಜನ, ನಿಶ್ಶಬ್ದ, ಭೂ ಗಗನಗಳ ಅಂತರವು ಉಜ್ವಲವಾದ ನಕ್ಷತ್ರಗಳಿಂದ ಅಲ್ಲದೆ ತಿಳಿಯಲು ಅಸಾಧ್ಯ. ನೀಲವಾದ ಆಕಾಶದಲ್ಲಿ ಪ್ರಭಾಪುಂಜದಂತಿರುವ ಸಾವಿರಾರು ನಕ್ಷತ್ರಗಳು—ಕರಿಕಂಬಳಿಯಲ್ಲಿ ದಟ್ಟವಾಗಿ ಚಿಮಿಕಿಸಿದ ವಜ್ರದ ಗೊಂಚಲುಗಳಂತಿರುವ ನಕ್ಷತ್ರಗಳು. ಈ ನಿಶಿಯಲ್ಲಿ ಶೈಲಿನಿಯು ಒಬ್ಬಳೇ ಹೋಗುತ್ತಿದ್ದಳು. ಎಲ್ಲಿಗೆ ಹೋಗುತ್ತಿದ್ದಳೆಂಬುದು ವಾಚಕರಿಗೆ ತಿಳಿದಿದೆ. ರಾಜಮಾರ್ಗದಿಂದ ಕವಲಾಗಿ ಹೋದ, ಅಳಿಸಿದ ಕಾಲುಹಾದಿಯನ್ನು ಹಿಡಿದು ಹೋಗುತ್ತಿದಳು. ಶೈಲಿನಿಯ ಗುರುತು ಯಾರಿಗೂ ಹತ್ತದು. ಹಾದಿಯಲ್ಲಿ ಜನಸಂಚಾರವಿಲ್ಲ; ಅದರಮೇಲೂ ಅಂಧಕಾರ; ಅದೂಲಲ್ಲದೆ ಗಂಡು ಉಡುಪನ್ನು ಉಟ್ಟುಕೊಂಡಿದ್ದಳು. ಆ ಕಾಲದಲ್ಲಿ ರೋಗಿಗಳ ಚಿಕಿತ್ಸೆಗೆ ಹೋಗುವ "ಹಕೀಮರು?" ಯಾವ ಉಡುಪನ್ನು ಧರಿಸಿಕೊಳ್ಳುತ್ತಿದ್ದರೋ, ಆ ವೇಷವನ್ನು ಶೈಲಿನಿಯು ಇಂದು ಅಳವಡಿಸಿದ್ದಳು. ಇದೇ ವೇಷದಲ್ಲಿ ಅವಳು ಒಂದೆರಡು ಸಲ ಮರಾಟರ ಶಿಬಿರಕ್ಕೆ, ಹೋಗಿದ್ದಳು. ಅವಳ 'ಇಚ್ಛಿತ ವರ'ನು ಸಂಕೇತ ಮಾಡಿದ ರಾತ್ರಿಯಲ್ಲೇ ಶೈಲಿನಿಯು ಅವನ ಆಶಾನುಬದ್ಧಳಾಗಿ ಒಂದು ಗುರುವಾರ ಹೋದಳು. ಆದರೆ ಆ ದಿನ ಶಿವಾಜಿಯು ತನ್ನ ಪರಿಜನರೊಡನೆ ಯಾವುದೋ ಒಂದು ರಾಜ್ಯಾಲೋಚನೆಯನ್ನು ಕುರಿತು ವಿಚಾರಮಗ್ನನಾಗಿದ್ದುದರಿಂದ, ಶೈಲಿನಿಯು ಕೃತಕಾರ್ಯಳಾಗಲಿಲ್ಲ. ಶಿವಾಜಿಯ ಅಸ್ವಸ್ಥವು ಶೈಲಿನಿಯ ಪುನರಾಗಮನಕ್ಕೆ ಕಾರಣವಾಯಿತು. ಶಿವಾಜಿಗೆ ಮೂಲಿಕೆಯನ್ನು ತಂದುಕೊಡುವ ನಿಮಿತ್ತವಾಗಿ ಶೈಲಿನಿಯು 'ಹಕೀಮ' ವೇಷದಲ್ಲಿ ಬಂದು ಹೋಗುತ್ತಿದ್ದಳು. ಇದೆಲ್ಲವನ್ನು ಶಿವಾಜಿಯು ಅರಿತಿದ್ದನೋ ಇಲ್ಲವೋ ನಮಗೆ ಗೊತ್ತಿಲ್ಲ. "ಹಕೀಮನನ್ನು" ಮರಾಟರ ಶಿಬಿರದಲ್ಲಿ ಪ್ರವೇಶ ಮಾಡುವುದಕ್ಕೆ, ಯಾರೂ ಅಡ್ಡಿ ಮಾಡುತ್ತಿರಲಿಲ್ಲ. ಅವಳು ಒಳಹೋಗಿ ಯಾರೋ ಒಬ್ಬನ ಕೂಡೆ ಮಾತನಾಡಿ ಮರಳಿ ಹೋಗುತ್ತಿದ್ದಳು. ಈ ಕಥಾಪ್ರಾರಂಭದಲ್ಲಿ, ಯಾರು ರಹಸ್ಯವಾಗಿ ಶೈಲಿನಿಯ ಮಂದಿರದ

ಮರಹತ್ತಿ, ಅವಳ ಪಾಣಿಗ್ರಹಣ ಮಾಡಿದನೋ, ಆ ಮಹಾಶಯನೊಡನೆ ಮಾತನಾಡಿ ಶೈಲಿನಿಯು ಮನೆಗೆ ಹಿಂದೆರಳುತ್ತಿದ್ದಳು. ಈ ರಾಯನು ಎರಡು ದಿವಸಗಳ ಹಿಂದೆ, ಇವರಿಬ್ಬರು ಮರಾಟರ ಶಿಬಿರದ ಬಳಿಯಲ್ಲಿರುವ ಏಕಾಂತವಾಗಿ ಪ್ರಣಯ ಸಲ್ಲಾಪ ಮಾಡುತ್ತಿದ್ದಾಗ, ಮುಆಜಮನು ಶೈಲಿನಿಯ ಗುರುತು ಹಿಡಿದನು; ಮುಆಜಮನು ಅವರ ಸಂಭಾಷಣೆಗೆ ವಿಘ್ನವಾಗಿ ಬಂದುದು ಮಾತ್ರವಲ್ಲ; ಅದಕ್ಕಿಂತಲೂ ಸ್ವಲ್ಪದೂರಕ್ಕೆ ಹೋದನು. ಅವನು ಕೋಪಗೊಂಡು ತನ್ನ ಕೈ ಬಿಟ್ಟದ್ದು ಒಂದು; ಅನ್ಯರಿಗೆ ಕೈ ಕೊಟ್ಟದ್ದು ಒಂದು— ಇವೆರಡರಿಂದ ಮುಆಜಮನು ರೋಷಾವೇಶಗೊಂಡನು. ಅವನು ಶೈಲಿನಿಯ ವಿಷಯವಾಗಿ ರಾಜಸಿಂಹನ ಕಿವಿಯಲ್ಲಿ ದೂರು ಸುರಿದನು. “ಶಿವಾಜಿಯು ನಿನ್ನ ಮಗಳನ್ನು ಎತ್ತಿಕೊಳ್ಳುವನು” ಎಂದು ಗದ್ದಲ ಹಚ್ಚಿದನು. ಮೊದಲೇ ಶಿವಾಜಿಯ ಮೇಲೆ ರಾಜಸಿಂಹನಿಗೆ ಇದ್ದ ಅಲಕ್ಷ್ಯಭಾವವು ಮುಆಜಮನ ಮಾತಿನಿಂದ ದ್ವೇಷವಾಗಿ ಪರಿಣಮಿಸಿತು. ಮಗಳು ಜಾರಿಹೋಗದಂತೆ ರಾಜಸಿಂಹನು ಅವಳನ್ನು ಕೊಟ್ಟಡಿಯಲ್ಲಿ ಮುಚ್ಚಿಟ್ಟನು. ದಿನಕ ಎರಡು ಬಾರಿ ರಾಜಸಿಂಹನು ಅವಳನ್ನು ನೋಡುವನು; ಆದರೆ ಪೂರ್ವದಂತೆ ಮಾತನಾಡುತ್ತಿರಲಿಲ್ಲ, ರಾಜಸಿಂಹನ ದರ್ಶನವಾಗುತ್ತಲೇ ಬಂಧಿತಳಾದ ಶೈಲಿನಿಯು “ಶಿವಾಜಿ ಮಹಾರಾಜರು ಹೇಗಿರುವರು?” ಎಂದು ಕೇಳುವಳು. ತಂದೆಯು ಮಾತಿಲ್ಲದವನಾಗಿ, ಶಿವಾಜಿಯ ಪೂರ್ವಜರ ನಾಮಸ್ಮರಣೆ ಮಾಡುತ್ತ, ಮಹಡಿಯಿಂದ ಕೆಳಕ್ಕೆ ಇಳಿದು ಹೋಗುವನು. ಈ ದಿನ ರಾಜಸಿಂಹನು ಕಾರ್ಯಗೌರವದಿಂದ ಅರಮನೆಯಲ್ಲಿ ಹಗಲೆಲ್ಲಾ ತಳುವಿದ್ದನು. ಯಾವ ಕಾರ್ಯವಿಶೇಷದಿಂದ ಅವನು ವಿಳಂಬಿಸಿದ್ದನೋ ಅದನ್ನು ಶೈಲಿನಿಯ ತಿಳಿದಿದ್ದಳು. ರಾಜಸಿಂಹನು ಹಿಂದಿನ ರಾತ್ರಿ ಮುಆಜಮನೊಡನೆ ಬಾದಶಹನ ಯಾವ ಆಜ್ಞೆಯನ್ನು ತಾವು ಮನ್ನಿಸಬೇಕೆಂಬ ವಿಷಯದಲ್ಲಿ ಮಾತುಕಥೆಯನ್ನು ನಡೆಯಿಸುತ್ತಲಿದ್ದರೋ, ಆ ಮಾತುಗಳನ್ನೆಲ್ಲಾ ಶೈಲಿನಿಯು ಮಹಡಿಯ ಕೊಟಡಿಯಲ್ಲಿ ಇದ್ದು ಕೇಳಿದ್ದಳು. ಅದಕ್ಕೋಸ್ಕರವೇ ಅವಳ ಹೃದಯವು ಮರಾಟರ ಶಿಬಿರಕ್ಕೆ ಹಾರಿಹೋಗುವುದಕ್ಕೆ ಸಂಕಷ್ಟಗೊಳ್ಳುತ್ತಲಿತ್ತು.

ಶೈಲಿನಿಯು ಕಾಲುನಡೆಯಾಗಿ ಹೋಗುತ್ತಿದ್ದಳು. ಹಾದಿಯಲ್ಲಿ ತಾನೇ ಆತ್ಮಗತವಿಚಾರ ಮಾಡಿಕೊಳ್ಳುತಿದ್ದಳು. ಅವಳ ಇದಿರಿಗೆ ಆಕಾಶದಲ್ಲಿ ಚಂದ್ರನು ಉದಯವಾಗುತ್ತಲಿದ್ದನು. ರೋಹಿಣಿ ನಕ್ಷತ್ರವು ಚಂದ್ರನ ಸಮೀಪಕ್ಕೆ ಬರುವಂತೆ ಅವಸರಗೊಳ್ಳುತಲಿತ್ತು. ಶೈಲಿನಿಯು ನಿಶಾನಾಥನನ್ನು ನೋಡಿ ಏನೇನೋ ಹೇಳತೊಡಗಿದ್ದಳು. “ಚಂದ್ರನೇ! ನೀನು ವಿರಹಿಗಳ ವೈರಿ ಎಂಬುದು ನಿಜವೇ? ನೀನು ಕಾಮುಕರ ತಾಪಕಾರಕನೆಂಬುದು ಸತ್ಯವೇ? ಹಾಗಿದ್ದರೆ ಈ ಕತ್ತಲಾದ, ಕಂಗಾಣದ ಹಾದಿಯಲ್ಲಿ ನನ್ನ ಮಾರ್ಗಪ್ರದರ್ಶಕನಾಗಿ ಏಕೆ ಉದಯಿಸುತ್ತಲಿರುವೆ? ನಿನ್ನ ರೋಹಿಣಿಯು ನಿನ್ನ ಸಮೀಪಕ್ಕೆ ಬರುತ್ತಿರುವಳು. ನೀನು ದೂರದೂರಕ್ಕೆ ಹೋಗುತ್ತಿರುವುದೇಕೆ? ನನ್ನ ಜೀವಿತೇಶನು ನಿನ್ನಂತೆ ಗಗನದಲ್ಲಿ ಚಲಿಸುತ್ತಿದ್ದರೆ, ನಾನು ರೋಹಿಣಿಯಂತೆ ಅವನನ್ನು ಅನುವರ್ತಿಸುತಿದ್ದೆನು. ನನ್ನ ಪ್ರಿಯನು ನಿನ್ನಂತೆಯೇ ಇರುವನು; ನಿನ್ನಂತೆಯೇ ಸೌಂದರ್ಯಮಯನು; ಸುಧಾಮಯನು; ಶಾಂತನು. ಛಿ! ಛಿ! ಈ ಸಾಮ್ಯವು ಸರಿಹೋಗದು. ಅವನ ಪ್ರೀತಿಯು ನಿನ್ನಂತೆ ದಿನೇ ದಿನೇ ಕುಂದಬಹುದೇ? ನೀನು ರೋಹಿಣಿಯಿಂದ ದೂರಕ್ಕೆ ಮನಸ್ಸಿಯಾಗಿ ಸಾರುವಂತೆ, ಅವನ ಪ್ರೀತಿಯು ಗಳಿತವುಗಬಹುದೇ? ಹಾಗೆ ಪ್ರೇಮವು ಕುಂದದಿದ್ದರೆ ಮೊನ್ನೆ ನನ್ನೊಡನೆ ಏತಕ್ಕೆ ಅಷ್ಟು ಉದಾಸೀನನಾದನು? ನಾವು ಏಕಾಂತದಲ್ಲಿದ್ದರೂ ನನ್ನನ್ನು ಸರಿಯಾಗಿ ಆದರಿಸಲಿಲ್ಲವೇಕೆ? ನನ್ನ ಪ್ರೇಮಸಲ್ಲಾಪವನ್ನು ಕಳ್ಳುನುಡಿಗಳಿಂದ ಜಗುಳಿಸಿದನೇಕೆ? “ನನ್ನ ಪ್ರೇಮಪಾಶದಲ್ಲಿ ಸಿಕ್ಕಿ ಮೋಸಹೋದೆ” ಎಂದು ಮೈಮರೆದಂತೆ ಹೇಳಿದನೇತಕ್ಕೆ? ನನ್ನನ್ನು ಮಧುರವಾದ ಮಾತುಗಳಿಂದ ಕಳುಹಿಸಿ ಕೊಡಲಿಲ್ಲವೇಕೆ? ಛಿ! ಮನವೇ ಕೊಂಚ ತಡೆ! ತಡೆ! ಸುಮ್ಮನೆ ಬಹಳ ದೂರಕ್ಕೆ ಯೋಚಿಸುತ್ತಿರುವೆ. ನೀನೂ ಅವನ ಪಕ್ಷವಾಗಿ ಹೇಳಲಾರೆಯಾ? ಶಿವಾಜಿಯು ಕಾರ್ಯಾಂತರದಲ್ಲಿರಬಹುದು. ದುಷ್ಟ ಅವರಂಗಜೇಬನ ಬಂದಿಯಿಂದ ತಪ್ಪಿಸಿಕೊಳ್ಳುವ ವಿಚಾರದಲ್ಲಿ ಅವನ ಮನಸ್ಸು ಮಗ್ನವಾಗಿದ್ದಿರಬಹುದು. ಹಾಗೆ ಮಗ್ನವಾಗಿತ್ತು ಎಂದು ತಿಳಿಯಲೆ? ಆದರೂ ಈ ಹತಭಾಗಿನಿಗೆ ಆ ಹೃದಯದಲ್ಲಿ ಒಂದು

ಎಡೆಯಿಲ್ಲವೇ? ರಾಜ್ಯಕಾರ್ಯವು ವಿಶೇಷವಾದ ಮಾತ್ರಕ್ಕೆ ಅರಸರು ತಮ್ಮ ಪ್ರಾಣವಲ್ಲಭೆಯರನ್ನು ತ್ಯಜಿಸಿಬಿಡುವರೇ? ಬಿಡುವಂತಹರು ಬಿಡುವರು. ಶ್ರೀರಾಮನು ತನ್ನ ಪತ್ನಿಯನ್ನು ತೊರೆದನು. ದೂರೋ ಬಾಯನ್ನು ಮುಚ್ಚುವುದಕ್ಕೆ ರಾಮನು ಜಾನಕಿಯನ್ನು ಕೈಬಿಟ್ಟನು. ನನ್ನಲ್ಲಿ ದೋಷವೇನು? ಹಗಲೆಲ್ಲಾ ಪತಿದೇವತೆಯ ಧ್ಯಾನಮಾಡುತ್ತ, ಎಂದಿಗೆ ಸುಖಿಯಾಗುವೆನು ಎಂದು ಚಿಂತಿಸುತ್ತ ಇರುವುದು ದೋಷವೇ? ಇರುಳೆಲ್ಲಾ ನಿದ್ದೆಯಿಲ್ಲದೆ ನೆಲದ ಮೇಲೆ ಹೊರಳುತ್ತ, ಕನಸುಕಂಡ ಮಾತ್ರಕ್ಕೆ ಸುಖಿಯೆಂದು ತಿಳಿದು, ಎಚ್ಚರವಾಗಿ ನೋಡುವುದು ದೋಷವೇ? ತಂದೆಯ ಮಾತನ್ನು ಮೀರಿ, ಅನೇಕ ನೃಪಕುಮಾರರನ್ನು ತ್ಯಜಿಸಿ, ನೀನೆ ಗತಿಯೆಂದು ನಂಬಿದುದು ದೋಷವೇ? ನಾನು ಮೂರ್ಖಳು. ಸುಮ್ಮನೆ ಹುಚ್ಚಳಂತೆ ಮಾತಾಡುವೆನು. ನನ್ನ ಮನಸ್ಸಿನ ಭ್ರಮೆ; ನನ್ನ ಹುಚ್ಚು ಭ್ರಾಂತಿ. ಪತಿಯ ಪ್ರೇಮದಲ್ಲಿ ಸಂಶಯಪಡುವವಳು ಮೂರ್ಖಳಲ್ಲದೆ ಮತ್ತೇನು? ನನ್ನವಲ್ಲಭನ ಪ್ರೀತಿಯು ಅಚಲವಾದುದು; ಪರ್ವತದಂತೆ ಅಚಲವಾದುದು. ನಕ್ಷತ್ರವು ಸ್ಥಿರವಾದುದು; ಅದು ಅಸ್ಥಿರವೆಂಬುದು ಚಲಿಸುತ್ತಿರುವವನ ಸುಳ್ಳು ಭಾವನೆಯಾಗಿದೆ. ಪತಿಯ ಪ್ರಣಯಮುಕುರದಲ್ಲಿ ನಮ್ಮ ಮನೋಭಾವವೇ ಪ್ರತಿಬಿಂಬಿಸುವುದಲ್ಲದೆ, ಅದು ತಾನೇ ವರ್ಣರಹಿತವಾದುದು. ನಾನು ಇದನ್ನೆಲ್ಲಾ ಚಿಂತಿಸುವಷ್ಟಕ್ಕೆ ನನ್ನ ನಡೆಯು ಹಿಂಚುವುದು. ನನ್ನ ವಿಳಂಬವು ಘೋರ ಪ್ರಮಾದಕ್ಕೆ ಕಾರಣವಾಗುವುದು. ಇಕೋ! ಶಿಬಿರವು ನನ್ನ ಮುಂದೆ ತೋರುತ್ತಿರುವುದು. ಡಿಲ್ಲಿಯೇ! ನಿನಗೆ ನಮಸ್ಕಾರವು! ನಿನ್ನ ಧರ್ಮಾಂಧತೆಗೆ, ನಿನ್ನ ಕುಹಕೋಪಾಯಗಳಿಗೆ, ನಿನ್ನ ರಾಜತಂತ್ರಗಳಿಗೆ, ನಿನ್ನ ದುಷ್ಕಾರ್ಯಕೌಶಲಕ್ಕೆ ತ್ರಾಹಿ ಎನ್ನುವೆನು! ನಮ್ಮ ಸ್ವಾತಂತ್ರ್ಯಾಪಹಾರಿಯಾದ ನಗರವೇ! ನಾನು ಇನ್ನೂ ನಿನ್ನ ಮುಖವನ್ನು ನೋಡಲಾರೆನು. ರಾಜಪುತ್ರರ ಸುವರ್ಣಕಾರಾಗೃಹವೇ! ಯಾವಾತನನ್ನು ನಿನ್ನ ಮೋಸದ ಕೈಗಳಿಂದ ಬಂಧಿಸಬೇಕೆಂದು ನೀನು ಉಪಾಯವನ್ನು ಮಾಡುತ್ತಿರುವೆಯೋ, ಆತನ ಸಹಾಯದಿಂದಲೇ ನಾನು ನಿನ್ನ ಅಪವಿತ್ರ ಸ್ಥಳದಿಂದ ಮುಕ್ತಳಾಗುವೆನು! ನಿನ್ನ ಅಧೀಶ್ವರಿಯಾಗಿ ನಿನ್ನ ಸಾಮ್ರಾಜ್ಯರಥವನ್ನು ನಾನು

ನಡಿಸುವುದಕ್ಕೆ ಧಿಕ್ಕಾರವಿರಲಿ! ನಾನು ಶಿವಾಜಿಯ ದಾಸಿಯಾಗಿ ಅವನ ರಾಜ್ಯವೆಂಬ ಮಂದಿರದ ಬಳಿಯಣ ಕಸವನ್ನು ಗುಡಿಸಿ ಈ ಜೀವಕಾಲವನ್ನು ಕಳೆಯುವೆನು."

ಅರಮನೆಯ 'ಘುಸಾಲ್‌ಖಾನೆಯಲ್ಲಿ' ಅವರಂಗಜೀಬನು ಈ ರಾತ್ರಿ ಏಕಾಂತದಲ್ಲಿ ರಾಜ್ಯಕಾರ್ಯವನ್ನು ಕುರಿತು ಆಲೋಚಿಸುತ್ತಲಿದ್ದನು. ಮಂತ್ರಿಗಳು ಯಾರೂ ಅವನ ಬಳಿಯಲ್ಲಿ ಇರಲಿಲ್ಲ. ಬಾದಶಹನ ಬಲಗಡೆಯಲ್ಲಿ ರಾಜಸಿಂಹನು ನಿಂತಿದ್ದನು. ಸ್ವಲ್ಪ ದೂರದಲ್ಲಿ ಇಬ್ಬರು ಸಿಪಾಯರು ಕಾವಲಾಗಿದ್ದರು. ಬಾದಶಹನು ಹಣೆಯನ್ನು ನಿರಿಗೊಳಿಸಿ "ನಮ್ಮ ಮನಸ್ಸು ಸ್ವಸ್ಥವಾಗಿಲ್ಲ. ಮರಾಟನ ಶಿಬಿರಬಂದ ಏನೊಂದೂ ವರ್ತಮಾನ ಬರಲಿಲ್ಲ. ಹೋದ ಮುಆಜಮನು ಇನ್ನೂ ಬರಲಿಲ್ಲ. ನಮಗೆ ಯೋಚನೆ ಹತ್ತಿದೆ" ಎಂದು ಹೇಳಿದನು.

**ರಾಜಸಿಂಹ**:—"ಅಂತಹ ಯೋಚನೆಗೆ ಆಸ್ಪದವಿಲ್ಲ. ಈ ದೂತನು ಈಗ ತಾನೇ ಪಾಳೆಯದಿಂದ ಬಂದಿರುವನು. ಅವನು ಶಿವಾಜಿಯನ್ನು ಕಣ್ಣಾರೆ ನೋಡಿ ಬಂದಿರುವನು."

ಬಾದಶಹನು ಕೈಯಿಂದ ತಲೆಯನ್ನು ಸವರುತ್ತ, "ನೀವೆಲ್ಲರು ಹೇಗೆ ಹೇಳಿದರೂ, ನಮ್ಮ ಮನಸ್ಸಿಗೆ ಸಮಾಧಾನವಿಲ್ಲ. ಬೋನಿನಲ್ಲಿ ಬಿದ್ದ ಬೆಟ್ಟದ ಇಲಿಯು ತಪ್ಪಿಸಿಕೊಂಡಿರಬಹುದು ಎಂದು ನಮಗೆ ಶಂಕೆ ಉಂಟು. ನಮ್ಮ ಶಂಕೆ ಸುಳ್ಳಾಗಲಾರದು" ಎಂದನು.

ರಾಜಸಿಂಹನು ಸ್ವಲ್ಪ ಹತ್ತಿರಕ್ಕೆ ಬಂದು, "ಹುಜುರ್! ಅಂತಹ ಸಮಯ ಒದಗಿದರೆ ಈ ಸೇವಕನು ಯಾವ ಕಾರ್ಯಕ್ಕೂ ಸಿದ್ಧನಾಗಿರುವನು. ಬೋನು ಬಿಗಿಯಾದುದರಿಂದ, ಇಲಿಯು ತಪ್ಪಿಸಿಕೊಳ್ಳಲಾರದು" ಎಂದು ಸಮಾಧಾನಗೊಳಿಸಿದನು.

ಬಾದಶಹನು ಸ್ವಲ್ಪ ಆಲೋಚಿಸುತ್ತ, ಮುಆಜಮನು ಬರುವ ತನಕ ನೀನು ಇಲ್ಲಿಯೇ ಇರುವೆಯಾ? ಅವನು ವಿಲಾಸಪ್ರಿಯನು; ವಿಲಾಸದಲ್ಲಿ ಮಗ್ನನಾಗಿ ಇರುಳೆಲ್ಲಾ ಕಳೆದರೆ, ಕಾರ್ಯವು ಕೆಟ್ಟುಹೋಗುವುದು" ಎಂದನು.

**ರಾಜಸಿಂಹ**:— "ಅಪ್ಪಣೆಯಾದರೆ ನಾನೇ ಹೋಗುವೆನು."

ಬಾದಶಹನು ಸ್ವಲ್ಪ ಶಾಂತನಾದನು. ರಾಜಸಿಂಹನ ಕಡೆಯ ಮಾತುಗಳಿಂದ ಅವನ ಶಿರಸ್ಸಿನ ಭಾರವು ಕೊಂಚ ಇಳಿದಂತಾಯಿತು. ಒಡನೆ ಅವರಂಗಜೇಬನು ರಾಜಸಿಂಹನನ್ನು ತನ್ನ ಬಳಿಗೆ ಕರೆದು, ಅವನ ಕಿವಿಯಲ್ಲಿ ಏನನ್ನೋ ಉಸುರಿದನು. ರಾಜಸಿಂಹನು ಇನ್ನೂ ಅಲ್ಲಿ ತಡೆಯಲಿಲ್ಲ. ಅವನು ಬಾದಶಹನಿಗೆ ಪ್ರಣಾಮವನ್ನು ಮಾಡಿ, ಅರಮನೆಯಿಂದ ಹೊರಟುಹೋದನು.

ಮಧುರವಾದ ಚಂದ್ರೋದಯ. ಬೆಳದಿಂಗಳಲ್ಲಿ ನನೆದ ಮರಾಟರ ಶಿಬಿರ. ಶಿಬಿರವು ಸುತ್ತಲೆಲ್ಲಾ ರಜತಮಯವಾದಂತಿತ್ತು. ಚಂದ್ರನು ಮೆಲ್ಲಮೆಲ್ಲನೆ ಇಳಿವಷ್ಟಕ್ಕೆ ಚಂದ್ರಿಕೆಯು ಮಂದಿರದ ತೆರೆದ ಕಿಟಕಿಗಳಿಂದ ಹಾಯ್ದು ಒಳಗಡೆಯ ಕತ್ತಲನ್ನು ತೊಲಗಿಸುತ್ತಲಿತ್ತು. ಮಂದಿರದ 'ಹೋಲ್' ಒಂದು ಚಂದ್ರಿಕೆಯಿಂದ ಉಜ್ವಲವಾಗಿತ್ತು. 'ಹೋಲ್' ಪರಿಷ್ಕಾರವಾಗಿತ್ತು. ಅದರ ಎರಡೂ ದ್ವಾರಗಳಿಗೂ ರೇಶ್ಮೆಯ ಪರದೆ; ಪರದೆಯಲ್ಲಿ ಚಿತ್ರಿತವಾದ ಹೂಗಳು. ಕಿಟಕಿಗೆ ಇದ್ದ ಪರದೆಯು ತೆರೆದಿತ್ತು. ಚಂದ್ರನ ಕಿರಣವು ಈ ಕಿಟಿಕಿಯಿಂದ ನುಸುಳಿ ಬಂದು, ಗೋಡೆಯ ಪಟ್ಟೆ, ತೂಗುಗಳ (Silk hangings) ಮೇಲೆ ಕುಣಿಯುತ್ತಲಿತ್ತು. ಗೋಡೆಗೆ ಸಮೀಪವಾಗಿ ಪರ್ಯಂಕ; ಬೆಳ್ಳಿಯ ಕಾಲುಗಳುಳ್ಳ ಪರ್ಯಂಕ. ಮಂಚದ ನಾಲ್ಕು ಕಂಬಗಳಿಗೂ ಬೆಳ್ಳಿ; ಇವುಗಳ ಮೇಲೆ ಚಿನ್ನದ ಹುಲಿಯ ಮುಖಗಳು. ಮಂಚದ ಕೆಳಗೆ ಮೆತ್ತಗಾದ, ದಪ್ಪಗಾದ ರತ್ನಗಂಬಳಿಯು ಹಾಸಿತ್ತು. ಗೋಡೆಗಳಲ್ಲಿ ಚಿತ್ರಗಳು ಇದ್ದಂತೆಯೇ ರತ್ನಗಂಬಳಿಯ ಮೇಲೂ ಚಿತ್ರಗಳು. ಮಂಚದ ಮೇಲೆ ಹಂಸತೂಲಿಕಾತಲ್ಪ. ಕಿನ್‌ಕಾಬಿನಿಂದ ರಚಿತವಾದ ಮೃದುವಾದ ಹಾಸಿಗೆ. ಹಾಸಿಗೆಯ ಮೇಲೆ, ಡಾಕ್ಕಾ ಮಲ್‌ಮಲಿನ ಹೊದಿಕೆ. ಹಾಸಿಗೆಯ

ಇಕ್ಕಡೆಗಳಲ್ಲಿಯೂ ತುಪ್ಪುಳಿನ ತಲೆದಿಂಬುಗಳು. ಹಾಸಿಗೆಯ ಮೇಲೆ ಯಾರೂ ಮಲಗಿದಂತೆ ತೋರಲಿಲ್ಲ. ಹೊದಿಕೆಯು ಸುರ್ಕುಗೊಂಡಿರಲಿಲ್ಲ. ಅಂತಸ್ತಿನಿಂದ ಬೆಳ್ಳಿಯ ತೂಗುದೀಪವೊಂದು ಮಿಣಮಿಣನೆ ಉರಿಯುತ್ತಲಿತ್ತು. ದೀಪಕ್ಕೆ ಚಿನ್ನದ ಸರಪಣಿ; ಗಂಧದ ಎಣ್ಣೆ. ದೀಪದ ಕೆಳಗೆ ಆಜಾನುಬಾಹುವಾದ ಯುವಕನೊಬ್ಬನು ಏನನ್ನೋ ಯೋಚಿಸುತ್ತ ಕುಳಿತಿದ್ದನು. ಯುವಕನು ಒಂದು ತಡವೆ ಕಣ್ಣೊರಸುತ್ತ, ಮತ್ತೊಂದು ತಡನೆ ಚಂದ್ರನನ್ನು ನೋಡುತ್ತಲಿದ್ದನು. ನಡುನಡುನೆ "ನಾನೇಕೆ ಹೀಗೆ ಮಾಡಿದೆನು?" ಎನ್ನುವನು. ದೀಪವು ನಂದಿಹೋಗುವಂತಿತ್ತು. ಯುವಕನು ಅದನ್ನು ಸರಿಮಾಡುವುದಕ್ಕೆ ಎದ್ದನು. ಅಷ್ಟರಲ್ಲಿ ಹೊರಕ್ಕೆ ಯಾರೋ ಬಂದಂತೆ ಸದ್ದಾಯಿತು. ಬಂದವನಿಗೆ ಯುವಕನಿದ್ದ ಕೊಟ್ಟಡಿಯನ್ನು ಪ್ರವೇಶಿಸುವುದಕ್ಕೆ ಯಾರೂ ಅಡ್ಡಿಮಾಡಲಿಲ್ಲ. ಬಂದವಳು "ಹಕೀಮನ" ವೇಷದಲ್ಲಿದ್ದ ಶೈಲಿನಿ.

**ಯುವಕ**:—"ಶೈಲಿನಿ! ನೀನು ಈ ಗಂಭೀರವಾದ ರಾತ್ರಿ ಇಲ್ಲಿ ಬಂದೆ ಏತಕ್ಕೆ?"

ಶೈಲಿನಿಯು ಈ ಮಾತಿನಿಂದ ನೀರಾವಳಾದಳು. ಸಲ್ಲಾಪದ ಪ್ರಾರಂಭದಲ್ಲೇ ಕೇಳಿದ ವಿಪರೀತವಾದ ಪ್ರಕ್ನೆಗೆ ಶೈಲಿನಿಯ ತುಟಿಗಳು ಉತ್ತರವಿಲ್ಲದೆ ಅಲುಗಿದುವು.

ಯುವಕನು "ಏಕೆ ಬಂದೆ? ಏಕೆ ಪ್ರಯಾಸಪಟ್ಟೆ?" ಎಂದು ಮತ್ತೂ ಕೇಳಿದನು.

ಶೈಲಿನಿಯು ಸ್ವಲ್ಪ ಧೈರ್ಯಗೊಂಡ. "ನಿನ್ನ ಕ್ಷೇಮವನ್ನು ವಿಚಾರಿಸುವುದಕ್ಕೆ; ಅವರಂಗಜೇಬನ ಕೃತ್ರಿಮವನ್ನು ತಿಳಿಸುವುದಕ್ಕೆ" ಎಂದಳು.

ಯುವಕನು ನಿಟ್ಟುಸಿರಿಡುತ್ತ "ಎಲ್ಲವೂ ಕೃತ್ರಿಮ" ಎಂದು ಹೇಳಿ ಪುನಃ ಉಸಿರು ಬಿಟ್ಟನು.

ಶೈಲಿನಿಯ ಹೃದಯವು ದಡದಡಿಸತೊಡಗಿತು. ಆದರೂ ಅವಳು ಮನಸ್ಸನ್ನು ಸ್ಥಿರಗೊಳಿಸಿ, ತನ್ನ ಪ್ರಿಯನ ಮಾತನ್ನು ಲಕ್ಷಿಸದಂತೆ ಮಾಡಿ, "ನನ್ನ ತಂದೆಯು ವಿಚಾರವಿಲ್ಲದೆ ಮಾಡಿದ ಕೃತ್ಯಕ್ಕೆ ನೀನು ಇಷ್ಟು—?"

ಯುವಕನು ಕಣ್ಣೀರನ್ನು ಕಾಣಿಸದೆ ಒರಸುತ್ತ “ಎಲ್ಲರೂ ವಿಚಾರವಿಲ್ಲದೆ ಕೆಲಸಮಾಡುವರು. ನಾನೂ ಹಾಗೆಯೇ, ನೀನೂ ಹಾಗೆಯೇ, ಎಲ್ಲರೂ ಹಾಗೆಯೇ” ಎಂದು ಸ್ತಬ್ಧನಾದನು.

ಯುವಕನ ಮಾತುಗಳು ಶಲ್ಯದಂತೆ ಶೈಲಿನಿಯ ಮನಸ್ಸನ್ನು ಚುಚ್ಚಿದುವು. ಶೈಲಿನಿಯು ಹತ್ತಿರ ಬಂದು, “ನಾನು ವಿಚಾರವಿಲ್ಲದೆ ಮಾಡಿದ ಕಾರ್ಯವು ಯಾವುದು?” ಎಂದು ಕೇಳಿದಳು.

ಯುವಕನು ತಲೆಯನ್ನು ಕೈಯಿಂದ ಆದರಿಸುತ್ತ “ನ—ನನ್ನನ್ನು—ಪ್ರೀ—ಪ್ರೀತಿಸಿದುದು” ಎಂದು ಹೇಳಿ, ಮುಖವನ್ನು ತಗ್ಗಿಸಿದನು.

ಶೈಲಿನಿಯ ಹೃದಯವು ವಿದೀರ್ಣವಾಗುವಂತಿತ್ತು. ಅವಳು ಕಿಟಕಿಯ ಕಡೆಗೆ ಕಣ್ಣೆತ್ತಿ ನೋಡಿದಳು. ಚಂದ್ರನು ಇದಿರಿಗೆ ತೋರುತ್ತಿರಲಿಲ್ಲ. ಶೈಲಿನಿಯು ಕಾತರಸ್ವರದಿಂದ, “ನನ್ನ ಕೃತ್ಯಗಳಲ್ಲಿ ವಿಚಾರವಿಲ್ಲ. ಅದನ್ನು ನಾನು ತಿಳಿದಿರುವೆ. ನನ್ನ ಪ್ರೀತಿಯಲ್ಲಿ ಅವಿಚಾರವು ಯಾವುದು? ತುಂಬಿಯು ಕಮಲದ ಬಳಿಗೈದುವುದರಲ್ಲಿ ಯಾವ ವಿಚಾರ ಮಾಡುವುದು?”

**ಯುವಕ**:—“ಕಮಲಪುಷ್ಪವೊ, ಕಿಂಶುಕಪುಷ್ಪವೊ ಎಂದು ನೋಡದೆ ಇರುವುದೇ?”

ಶೈಲಿನಿಯು ಬಾಯಲ್ಲಿ ಮಾತಿಲ್ಲದೆ ಯುವಕನನ್ನೇ ನೋಡುತ್ತನಿಂತಳು. ಯುವಕನು ರುದ್ಧಕಂಠನಾದನು. ಹೊರಕ್ಕೆ ಯಾರೋ ಬಂದಂತೆ ಸದ್ದು ಕೇಳಿಸಿತು.

ಒಡನೆ ಶೈಲಿನಿಯ ಕೈಯನ್ನು ಯುವಕನು ತನ್ನ ಕೈಯಿಂದ ಬಿಗಿ ಹಿಡಿದು “ಶೈಲಿನಿ! ನನ್ನನ್ನು ಮನ್ನಿಸು! ಶೈಲಿನಿ! ನನ್ನನ್ನು ಕ್ಷಮಿಸು!” ಎಂದು ಹೇಳಿ ಅಳತೊಡಗಿದನು.

ಅಷ್ಟರಲ್ಲಿ ಹೊರಗಿನ ಗದ್ದಲವು ಹೆಚ್ಚಾಯಿತು. ಶೈಲಿನಿಯು ಅವಾಕ್ಕಾದಳು. ಆದರೂ ಚಿತ್ತಸ್ಥೈರ್ಯದಿಂದ, “ರಾಜಾಧಿರಾಜ! ಈ ದಾಸಿಯು ಯಾವುದನ್ನು ಮನ್ನಿಸಬೇಕು? ನಾನು ಕ್ಷಮಿಸುವುದಕ್ಕೆ ಅಪರಾಧವೇನಿದೆ?” ಎಂದು ವಿಸ್ಮಿತನಯನಗಳಿಂದ ಕೇಳಿದಳು.

“ಒಳಗೆ ಹೋಗುವುದಕ್ಕೆ ಯಾರೆ ಅಪ್ಪಣೆಯೂ ಇಲ್ಲ” ಎಂದು ಹೊರಗಿಂದ ಮಾತುಗಳು ಕೇಳಿಸಿದುವು.

ಯುವಕನು ಒಮ್ಮೆ ಮಾತನಾಡಲಿಲ್ಲ, ಬಳಿಕ ಶೈಲಿನಿಯ ಮುಖವನ್ನು ತುಂಬಾ ನೋಡುತ್ತ, “ಶೈಲಿನಿ! ನೀನು ನನ್ನಿಂದ ವಂಚಿತಳಾದೆ—ವಂಚಿತಳಾದೆ. ನೀನು ಹೇಗೆ ವಂಚಿತಳಾದೆ ಎಂದು ನಾನೇ ಬಾಯ್ಬಿಟ್ಟು ಹೇಳುವ ಬದಲಾಗಿ ಈ ಪತ್ರವೇ ತಿಳಿಸುವುದು; ಇದನ್ನು ಓದಿ ನೋಡಿ, ನನ್ನ ಅಪರಾಧವನ್ನು ಕ್ಷಮಿಸು!” ಎಂದು ಹೇಳಿ, ಅಲ್ಲಿಯೇ ಕೈಗಳಿಂದ ಕಣ್ಣುಮುಚ್ಚಿ ನಿಂತುಬಿಟ್ಟನು.

ಹೊರಕ್ಕೆ ಮುಆಜಮನು ಪಹರೇಯವನನ್ನು ಗದರಿಸಿ, ಒಳಗೆ ಬಂದನು. ಅವನು ಕೊಟ್ಟಡಿಗೆ ಇದಿರಾಗಿ ಬರುವುದನ್ನು ಶೈಲಿನಿಯು ಕಂಡು “ರಾಜಾಧಿರಾಜ! ನನ್ನನ್ನ ರಕ್ಷಿಸು! ರಕ್ಷಿಸು!” ಎಂದು ಕೂಗಿದಳು.

ಮುಆಜಮನು ಶೈಲಿನಿಯನ್ನು ಸ್ವರದಿಂದ ಗುರುತಿಸಿದನು. ಅವನು ಒಳಕೊಟ್ಟಡಿಯ ಸಮೀಪಸ್ಥನಾಗಿ “ಶಿವಾಜಿರಾಜ! ಇದೇನು ಅಕೃತ್ಯವನ್ನು ಮಾಡುವೆ?” ಎಂದು ಕೇಳಿದನು.

ಶೈಲಿನಿಯ ಪ್ರಾಣವಲ್ಲಭನು ಮುಂದೆ ಬಂದು, ಶೈಲಿನಿಯನ್ನು ತನ್ನ ಬೆನ್ನ ಹಿಂದೆ ಇರಿಸಿ, “ನನ್ನ ಏಕಾಂತದ ಕೊಟ್ಟಡಿಗೆ ನೀನು ಯಾರ ಅನುಮತಿಯಿಂದ ಪ್ರವೇಶಮಾಡಿದೆ?” ಎಂದು ಕೇಳಿದನು. “ಎಲ್ಲವೂ ನಮ್ಮದಾದಲ್ಲಿ ನಾವು ಯಾರೊಡನೆ

ಕೇಳಬೇಕು?" ಎಂದು ಮುಆಜಮನು ಉತ್ತರ ಕೊಟ್ಟನು. "ಪುನಃ ನಮ್ಮ ನಗರದಲ್ಲಿ ಹೆಣ್ಣು ಕಳವು ಆಗದಂತೆ ನಾವು ಜಾಗರೂಕರಾಗಿರಬೇಕು." ಎಂದು ಮುಂದರಿಸಿದನು.

ಅವನ ಪ್ರತಿದ್ವಂದ್ವಿಯು ಉದ್ರೇಕಗೊಂಡನು. ಇಬ್ಬರಿಗೂ ಮಾತಿಗೆ ಮಾತು ಬಂದಿತು. ಮುಸಲ್ಮಾನನು ಕತ್ತಿಯನ್ನು ತೋರಿಸಿದೆನು. ಒಡನೆ ಹಿಂದುವು ಖಡ್ಗವನ್ನು ಕೈಯಲ್ಲಿ ಹಿಡಿದು, ಕೊಟ್ಟಡಿಯ ಹೊರಕ್ಕೆ ಹೋದನು. ಮುಆಜಮನು ಮುಂದೆ ಓಡತೊಡಗಿದನು. ಮಂದಿರದ ಒಳಕ್ಕೆ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಓಡಿಯೋಡಿ, ಮುಆಜಮನು ಹೊರಕ್ಕೆ ಬಂದು; ಪಹರೆಯವನಿಗೆ "ಬಾಗಿಲನ್ನು ಬಿಗಿಮಾಡು" ಎಂದು ಆಜ್ಞೆಕೊಟ್ಟನು.

ಮರಾಟನು ಹೊರಕ್ಕೆ ಬಾರದಂತೆ, ಪಹರೆಯವನು ಬಾಗಿಲನ್ನು ಬಿಗಿದುಬಿಟ್ಟನು. ಮರಾಟನು ಉಚ್ಚಸ್ವರದಿಂದ, "ಶೈಲಿನಿ! ಶೈಲಿನಿ! ಪ್ರಮಾದ ಸಂಭವಿಸುವಂತಿದೆ. ಬೇಗನೆ ಓಡಿಬಿಡು! ನಿನ್ನ ಪ್ರಾಣವನ್ನು ರಕ್ಷಿಸಿಕೊಳ್ಳು!" ಎಂದು ಹೇಳುತ್ತ ಮತ್ತೊಂದು ಕೊಟಡಿಗೆ ಹೋಗಿ, ತೆರೆದಿದ್ದ ಕಿಟಿಕಿಯನ್ನು ಹತ್ತುತಿದ್ದನು. ಅದನ್ನು ನೋಡಿ ಮಂದಿರದ ಜಗುಲಿಯ ಮೇಲಿದ್ದ ಮುಆಜಮನು ಓಡತೊಡಗಿದನು. ಶಿಬಿರದ ಸುತ್ತಲಿದ್ದ ಸೈನಿಕರೆಲ್ಲರು ಗದ್ದಲದಿಂದ ಸಂಭ್ರಾಂತರಾದರು. ಅಷ್ಟರಲ್ಲಿ ರಾಜಸಿಂಹನು ಮಂದಿರದ ಬಳಿಯಲ್ಲಿ ಇಬ್ಬರು ಸಿಪಾಯರೊಡನೆ ಬಂದು ಇಳಿದನು. ಮರಾಟನು ಕಿಟಕಿಯನ್ನು ಹತ್ತಿ, ಕೈಯಲ್ಲಿದ್ದ ಖಡ್ಗವನ್ನು ಜಳಪಿಸುತ್ತ ಕೆಳಗೆ ದುಮುಕುವುದಕ್ಕೆ ಸಿದ್ಧನಾಗಿದ್ದನು. ಮುಅಜಮನು ರಾಜಸಿಂಹನನ್ನು ನೋಡಿ. "ಅಯ್ಯಾ! ಶಿವಾಜಿಯು ನನ್ನನ್ನು ಅಟ್ಟಿಕೊಂಡು ಬರುವನು. ಇಕೊ! ನನ್ನನ್ನು ರಕ್ಷಿಸು—" ಎಂದು ಚೀರುತ್ತ ಹತ್ತಿರಕ್ಕೆ ಬಂದನು. ರಾಜಸಿಂಹನು ಮರಾಟನನ್ನು ನೋಡಿದನೊ ಇಲ್ಲವೊ, ಉಪ್ಪರಿಗೆಯ ಮೇಲೆ ಕಾವಲಿದ್ದ ಸೈನಿಕರಿಗೆ ಕೈಸನ್ನೆ ಮಾಡಿ, "ಕಳಚಿ ಬಿಡು!" ಎಂದು ಒದರಿದನು. ನೂರಾರು ಬಂಡಿಗಳ ಗಡಗಡ ಶಬ್ದದ ಚೀತ್ಕಾರವೊಂದು ಮಹಡಿಯಿಂದ ಕೇಳಿಸಿತು. ಮರಾಟನು ಕಿಟಕಿಯಿಂದ ಕೆಳಕ್ಕೆ ಹಾರಿದನು. ಕಣ್ಣು ಮುಚ್ಚುವಷ್ಟರಲ್ಲಿ

ಮಂದಿರದ ಉಪ್ಪರಿಗೆಯು ಮಾಡಿನೊಡನೆ ಜರಿದು ಜಾರಿ ಬರುವಂತಿತ್ತು. ಸಾವಿರಾರು ಬೀಳಲುಗಳಿಂದ ಆದರಿಸಿದ್ದ ಉನ್ನತವಾದ ಮಹತ್ತಾದ ಆಲದ ಮರವು ಸಿಡಿಲಘಾತದಿಂದ ಬುಡದೊಡನೆ ನೆಲಕ್ಕೆ ಒರಗುವಂತೆ, ಸೈನಿಕರು ಶೀಘ್ರವಾಗಿ ಗೊಣಸುಗಳನ್ನು ಕಳಚಿಬಿಡುತ್ತಲೇ, ಆ ಕೃತ್ರಿಮಭವನವು ಓರ್ಗುಡಿಸಿ ಬೀಳತೊಡಗಿತು.

ಮುಆಜಮನು ಕಳವಳದಿಂದ "ಅಯ್ಯೋ! ಅಯ್ಯೋ! ಶೈಲಿನಿಯು ಒಳಕ್ಕೆ ಇರುವಳು—ನಿನ್ನ ಮಗಳನ್ನು ರಕ್ಷಿಸು!" ಎಂದು ಚೀರಿದನು.

ಅದೇ ಸಮಯದಲ್ಲಿ ಶಿಬಿರದ ಅಂತಸ್ತು ಮರಾಟನ ತಲೆಯನ್ನು ಹಳಚಿತು. ಮರಾಟನು ಭಾರದಿಂದ ಮುಂದರಿಸಲಾರದೆ 'ಶೈಲಿನಿ-ಶೈ' ಎನ್ನುತ್ತ ಅಡ್ಡಗೆಡಲಿಕ್ಕಾದನು.

'ಶೈಲಿನಿ' ಎಂಬ ಮಾತು ಕಿವಿಗೆ ಬಿದ್ದಿತೊ ಇಲ್ಲವೊ ರಾಜಸಿಂಹನು ಉನ್ಮತ್ತನಾದನು. ಕೆಲಸವು ಕೈಮೀರಿ ಹೋಯಿತು. ಯಾರನ್ನೂ ಬದುಕಿಸುವುದಕ್ಕೂ ಉಪಾಯವಿರಲಿಲ್ಲ. 'ಅಮ್ಮಾ! ಶೈಲಿನಿ! ನೀನು ಎಲ್ಲಿ ಇರುವೆ?" ಎಂದು ಹೇಳಿ ರಾಜಸಿಂಹನು ಜೀವದಾಸೆಯಿಲ್ಲದೆ ಒಳಕ್ಕೆ ಹಾರಿದನು. ಸಿಪಾಯನೊಬ್ಬನು ಅವನನ್ನು ತಡಿಸುವುದಕ್ಕೆ ಹೋದನು. ಅವನು ಕೃತಕೃತ್ಯನಾಗಲಿಲ್ಲ. ಎತ್ತರವಾದ ಮಾಡು ಮಹಾಶಬ್ದದೊಡನೆ ನೆಲವನ್ನು ಚುಂಬಿಸಿಬಿಟ್ಟಿತು. ಆ ಭಯಂಕರ ಧ್ವನಿಯು ಆ ಗಂಭೀರವಾದ ರಾತ್ರಿಯಲ್ಲಿ ಅರಣ್ಯಮಧ್ಯದಲ್ಲಿ ಉಂಟಾದ ಗುಡುಗಿನಂತೆ ಕೇಳಿಸಿತು.

ಮುಆಜಮನು ಅರಮನೆಗೆ ಓಡಿದನು. ಬಾದಶಹನು 'ಘುಸಾಲ್ ಖಾನೆ'ಯಲ್ಲಿ ನಿದ್ದೆ ಹೋಗದೆ, ರಾಜಸಿಂಹನಿಂದ ಸಮಾಚಾರವನ್ನು ನಿರೀಕ್ಷಿಸಿದ್ದನು. ಮುಆಜಮನು ಬಾದಶಹನ ಬಳಿಗೆ ಬಂದು 'ಘೋರ ಪ್ರಮಾದವಾಯಿತು' ಎಂದನು.

ಅವರಂಗಜೇಬನು 'ಶಿವಾಜಿಯು ತಪ್ಪಿಸಿಕೊಂಡು ಹೋದನೆ?' ಎಂದು ಕಾಂಕ್ಷಿತಸ್ವರದಿಂದ ಕೇಳಿದನು.

**ಮುಆಜಮ್**:— 'ರಾಜಸಿಂಹನು ಶಿಬಿರವನ್ನು ಬಿಚ್ಚುವಂತೆ ಆಜ್ಞೆ ಮಾಡಿದನು'.

**ಬಾದಶಹ**:— 'ಶಿವಾಜಿಯು ಒಳಗೆ ಇರಲಿಲ್ಲವೇ?'

**ಮುಆಜಮ್**:— 'ಶಿವಾಜಿಯೂ ಇದ್ದನು. ಅವನೊಡನೆ ಶೈಲಿನಿಯೂ ಇದ್ದಳು' ಎಂದನು.

**ಬಾದಶಹ**:— 'ರಾಜಸಿಂಹನು ಮಗಳನ್ನು ರಕ್ಷಿಸಲಿಲ್ಲವೇ?'

**ಮುಆಜಮ್**:— 'ಮಗಳನ್ನು ರಕ್ಷಿಸುವುದು ಅಸಾಧ್ಯವಾಗಿದ್ದಿತು. ಮಗಳು ಒಳಗೆ ಇರುವಳೆಂದು ಕೇಳುತ್ತಲೇ ರಾಜಸಿಂಹನು ತಾನೂ ಬಲಿಬಿದ್ದನು'.

ಅವರಂಗಜೀಬನು ಇದನ್ನು ಕೇಳುತ್ತಲೇ ಶಿಬಿರದ ಕಡೆಗೆ ಹೊರಟನು. ಸೈನಿಕರಿಗೆ ಆಜ್ಞೆ ಮಾಡಿ ಹಾಳು ಕೊಂಪೆಯನ್ನೆಲ್ಲಾ ಬೆಳಗಾಗುವಷ್ಟರಲ್ಲಿ ತೋಡಿಸಿ ತೆಗೆದನು. ನಾಲ್ಕು ಮಂದಿ ರಜಪೂತ ಸೈನಿಕರು ಮರಾಟನ ಶವವನ್ನು ಅವರಂಗಜೇಬನ ಕಾಲಡಿಯಲ್ಲಿ ತಂದಿಟ್ಟರು. ಅವರಂಗಜೀಬನು ಮುಖದಲ್ಲಿ ಸಂತೋಷವನ್ನಾಗಲಿ ದುಃಖವನ್ನಾಗಲಿ ಸ್ಫುಟಮಾಡಲಿಲ್ಲ. ಶಿವಾಜಿಯು ಸತ್ತು ತನ್ನ ಪಾದಾಕ್ರಾಂತನಾದನೆಂದು ಮನಸ್ಸಿನಲ್ಲಿ ತಿಳಿದರೂ, ಬಾದಶಹನು ಶಾಂತನಾಗಿದ್ದನು. ಬಳಿಕ ರಾಜಸಿಂಹ ಶೈಲಿನಿಯರ ಶವಗಳು ತೆಗೆಯಲ್ಪಟ್ಟುವು. ಚಂದ್ರಕಾಂತಪುತ್ಥಳಿಯು ಚಂದ್ರಕಿರಣದಲ್ಲಿ ನೆನೆದು ಹೋದಂತೆ, ಶೈಲಿನಿಯ ದೇಹವು ತಣ್ಣಗಾಗಿದ್ದಿತು. ಬಾದಶಹನು ಶೈಲಿನಿಯ ದೇಹವನ್ನು ನೋಡುತ್ತ ನಿಂತನು. ಅವಳ ಹಸ್ತದಲ್ಲಿ ಬಿಗಿ ಹಿಡಿದ ಪತ್ರವೊಂದಿತ್ತು. ಬಾದಶಹನು ಕಾಗದವನ್ನು ಓದಿಸಿದನು. ಕಾಗದವು ಈ ಪರಿಯಾಗಿ ಬರೆದಿತ್ತು;—

ಶೈಲಿನಿ,

ನಿನ್ನನ್ನು ಹೇಗೆ ಸಂಬೋಧಿಸಬೇಕೆಂದು ಇದುವರೆಗೆ ನಿಶ್ಚಯಮಾಡಲಾರದವನಾಗಿದ್ದೇನೆ. ಒಂದೆರಡು ಬಾರಿ ನಿನ್ನನ್ನು 'ಪ್ರಿಯೆ, ಪ್ರಿಯೆ' ಎಂದು ಕರೆದಿದ್ದೇನೆ. ಹಾಗೆ ಏಕೆ ಕರೆದೆನೆಂದು ಈಗ ದುಃಖಪಡುತ್ತೇನೆ. ನಾನು ಹತಭಾಗ್ಯನು; ಪಾಪಿಯು. ನನ್ನ ಪಾಪದಿಂದ ನಿನ್ನ ದೇಹವನ್ನು ಪಾಸಮಯವಾಗಿ ಮಾಡಲು ನಾನು ಆಶಿಸುವುದಿಲ್ಲ. ಯಾವ ಕಾಲದಲ್ಲಿ ನೀನು ನಿನ್ನ ತಂದೆಯೊಡನೆ ಪ್ರತಾಪಗಡಕ್ಕೆ ಬಂದೆಯೋ ಆ ಕಾಲದಲ್ಲಿ ಈ ಪಾಪದ ಬೀಜವು ನನ್ನ ಹೃದಯದಲ್ಲಿ ಉಂಟಾಯಿತು. ನೀನು ಒಂದು ಸಾಯಂಕಾಲ ಪ್ರತಾಪಗಡದ ಉಪವನದಲ್ಲಿ ಏಕಾಕಿಯಾಗಿ ಏನನ್ನೋ ಚಿಂತಿಸುತ್ತ ಕುಳಿತಿದ್ದೆ. ಬಳಿಕ ಚಿಂತನೆಯನ್ನು ಬಿಟ್ಟು ನಿನ್ನ ಪ್ರಾಣೇಶನ ಸ್ಮರಣೆಯನ್ನು ಮಾಡತೊಡಗಿದೆ. ನಿನ್ನ ದೀರ್ಘವಾದ ಕೇಶದಾಮವು ಬೆನ್ನ ಮೇಲೆ ಗುಂಗುರು ಗುಂಗುರಾಗಿ ಹರಡಿತ್ತು. ಮುಖವು ಕೈ ದಳದ ಮೇಲೆ ಆಶ್ರಯಿಸಿತ್ತು. ಪ್ರಣಯಜನ್ಯವಾದ ಕಣ್ಣೀರುಗಳು ದರದರನೆ ಸುರಿಯುತ್ತಿದ್ದುವು. ಆಗ ನಾನು ಬಳಿಯಲ್ಲಿದ್ದ ನಿಕುಂಜದ ಮರೆಯಲ್ಲಿದ್ದೆನು. ವಿರಹಿಣಿಯಾದ ವನದೇವತೆಯಂತೆ ಒಪ್ಪುತ್ತಲಿದ್ದ ನಿನ್ನ ಮೂರ್ತಿಯನ್ನು ನೋಡಿ ನಾನು ಮುಗ್ಧನಾದೆನು. ನಾನು ಯೋಚಿಸಿದ ಕೃತ್ಯವು ಅಕಾರ್ಯವೆಂದು ನಾನು ಆಗ ತಿಳಿದಿದ್ದರೂ, ನಿನ್ನ ಲಾವಣ್ಯಮಯವಾದ ಶರೀರದ ಕಡೆಯಿಂದ ನನ್ನ ಮನಸ್ಸು ಹಿಂದೆಳೆಯಲಾರದೆ ಹೋದೆನು. ನಾನು ಮರೆಯಿಂದ ಹೊರಕ್ಕೆ ಬಂದೆನು. ನೀನು ನನ್ನನ್ನು ನೋಡಿ ಲಜ್ಜಿತಳಾದೆ. ನಾನು ಮಾತನಾಡುವಷ್ಟರಲ್ಲಿ ಕೋಟೆಯ ಘಂಟಾನಾದವಾದುದರಿಂದ, ನಾನು ನಿನ್ನನ್ನು ಬಿಟ್ಟು ಹೋಗಬೇಕಾಯಿತು. ನೀನು ನನ್ನ ಹೃದಯವನ್ನು ಓದಿಬಿಟ್ಟೆ.

ಶೈಲಿನಿ! ನಿನ್ನೊಡನೆ ಮುಚ್ಚುಮರೆ ಏಕೆ? ನಿನ್ನ ಪ್ರಣಯ ಸರ್ವಸ್ವವನ್ನು ನನಗೆ ಅರ್ಪಿಸಲಿಕ್ಕೆ ಇದ್ದ ನಿನ್ನೊಡನೆ ಮರೆ ಮೋಸವೇಕೆ! ನನ್ನನ್ನು ಶಿವಾಜಿ ಎಂದು ಭಾವಿಸಿ, ನೀನು ಮೋಸಹೋದೆ. ನಿನ್ನ ಹೃದಯವು ಶಿವಾಜಿ ಮಹಾರಾಜರು ಇರುವಲ್ಲಿ ಅಲ್ಲದೆ ಮತ್ತೆಲ್ಲಿ ಹೋಗುವುದು? ಕಮಲಿನಿಯು ರಾಜಹಂಸನಿಗೆ ಆಶ್ರಯ ಕೊಡುವುದಲ್ಲದೆ ಕಪ್ಪೆಯನ್ನು ಬಯಸುವುದೇ? ನಾನು ಶಿವಾಜಿರಾಜರ ಸ್ವಾಮಿಭಕ್ತನಾಗಿದ್ದರೂ ಸ್ವಾಮಿದ್ರೋಹಿಯಾದೆನು. ಮಹಾರಾಜರ ಅಪತ್ತುಗಳಲ್ಲಿ ನಾನು ಅವರಿಗೆ ನೆರವಾಗುವಂತೆ ನನಗೆ ಅವರು ಬಳಿಯಲ್ಲಿ ಆಶ್ರಯ ಕೊಟ್ಟಿದ್ದರು. ನನ್ನ ರೂಪ, ದೇಹ, ಆಕಾಶ, ವರ್ಣ ಎಲ್ಲವು ಶಿವಾಜಿರಾಜರಂತೆಯೇ. ಅವಳಿಜವಳಿ ಕೂಸುಗಳಲ್ಲಾದರೂ ಸ್ವಲ್ಪ ಭೇದ ತೋರಬಹುದು, ನಮ್ಮಲ್ಲಿರಲಿಲ್ಲ. ಏನೊಂದು ಪ್ರಮಾದ ಸಂಭವಿಸುವ ಹಾಗಿದ್ದರೆ, ರಾಜರು ನನ್ನನ್ನು ತಮ್ಮ ಸ್ಥಾನದಲ್ಲಿ ಇಟ್ಟು ಪ್ರಾಣವನ್ನು

ಉಳಿಸಿಕೊಳ್ಳುತಿದ್ದರು. ರಾಜರು ಒಂದು ಕಾಲ ದಿಲೇರಿಖಾನನ ಹಸ್ತಗತವಾಗುವಂತಿದ್ದರು. ಆಗ ರಾಜರ ಬದಲಿಗೆ ನಾನೇ ಬಹಿರಂಗದಲ್ಲಿ ಕಾರ್ಯವನ್ನು ವಿಚಾರಿಸುತ್ತಿದ್ದೆನು. ಯುದ್ಧದಲ್ಲಿ ರಾಜರಿಗೆ ಏಟು ತಗಲುನ ಹಾಗಿದ್ದರೆ, ಸೈನ್ಯವು ಹಿಂಜಾರದಂತೆ ನಾನೇ ನಾಯಕನಾಗಬೇಕಾಗುತ್ತಿತ್ತು. ಅಷ್ಟೇಕೆ! ಪ್ರಕೃತದಲ್ಲಿ ಬಾದಶಹರ ಬದಿಯಲ್ಲಿದ್ದ ಶ್ರೀ ಶಿವಾಜಿ ಮಹಾರಾಜರು ತಾವು ತಪ್ಪಿಸಿಕೊಂಡುದು ಬಾದಶಹರಿಗೆ ತಿಳಿಯಲು ಸ್ವಲ್ಪ ವಿಳಂಬವಾಗುವಂತೆ, ನನ್ನನ್ನು ಅವರ ಹಾಸಿಗೆಯ ಮೇಲೆ ಮಲಗಬೇಕೆಂದು ಆಜ್ಞೆಮಾಡಿದ್ದರು.

ಶೈಲಿನಿ! ಬ್ರಹ್ಮಹತ್ಯಕ್ಕಾಗಲಿ ಪತ್ನಿಹತ್ಯಕ್ಕಾಗಲಿ ಪ್ರಾಯಶ್ಚಿತ್ತವು ಉಂಟು. ಸ್ವಾಮಿದ್ರೋಹಕ್ಕೆ ಪ್ರಾಯಶ್ಚಿತ್ತವಿಲ್ಲ. ನಾನು ಶಿವಾಜಿರಾಜರ ಸೇನೆಯಲ್ಲಿ ಸೇರುವಾಗ ವಿವಾಹಮಾಡಿಕೊಳ್ಳುವುದಿಲ್ಲ ಎಂದು ರಾಜಚರಣಗಳನ್ನು ಹಿಡಿದು ಪ್ರಮಾಣ ಮಾಡಿದ್ದೆನು. ಅದಕ್ಕೋಸ್ಕರವೇ ನನ್ನ ಬಡ ತಾಯಿಯನ್ನೂ ತಮ್ಮಂದಿರನ್ನೂ ರಾಜ್ಯದ ವೆಚ್ಚದಿಂದ ಮಹಾರಾಜರು ಪೋಷಿಸುತ್ತಿರುವರು. ನಾನು ಈ ಸ್ಥಿತಿಯಲ್ಲಿ ವಿವಾಹಮಾಡಿಕೊಳ್ಳುವುದು ಅನುಚಿತವಾಗಿತ್ತು. ನನ್ನ ವಿವಾಹದಿಂದ ರಾಜಕಾರ್ಯಗಳಿಗೆ ತೊಡಕು ಉಂಟಾಗುವುದೆಂದು ನನಗೆ ಗೊತ್ತಿತ್ತು. ಆದರೆ ಅಂದು ನಿನ್ನ ರೂಪವನ್ನು ನೋಡಿ ನಾನು ಮರುಳಾದೆನು. ನನ್ನನ್ನು ಶಿವಾಜಿಯೆಂದು ಭ್ರಮಿಸಿ ನೀನೂ ಮರುಳಾದೆ. ನಾನು ಸ್ವಾಮಿದ್ರೋಹವನ್ನು ಮಾಡಿದುದು ಅಲ್ಲದೆ ನನ್ನ ಕಪಟವೇಶದಿಂದ ನಿನ್ನ ಹೃದಯವನ್ನೂ ಸೂರೆಗೊಳ್ಳಲಿಕ್ಕೆ ಇದ್ದೆನು. ನನ್ನ ಕಪಟಾಚರಣೆಯು ಶಿವಾಜಿ ಮಹಾರಾಜರಿಗೆ ಪ್ರಕೃತದಲ್ಲಿ ತಿಳಿದಿತ್ತೋ ಇಲ್ಲವೊ ನಾನು ಖಂಡಿತವಾಗಿ ಹೇಳಲಾರೆನು. ಆದರೆ ದಿನೇ ದಿನೇ ನನ್ನ ದ್ರೋಹವು ನನ್ನನ್ನೇ ಚುಚ್ಚತೊಡಗಿತು. ಅಂದಿನಿಂದ ನಿನ್ನನ್ನು ಏಕೆ ಪ್ರೀತಿಸಿದೆನೋ ಎಂದು ವಿಷಾದಗೊಂಡೆನು. ನೀನು ಆ ರಾತ್ರಿ ಗುಪ್ತವೇಷದಿಂದ ಶಿಬಿರಕ್ಕೆ ಬಂದಾಗ ನಿನ್ನ ಮೇಲೆ ಉದಾಸೀನಗೊಳ್ಳಲಿಕ್ಕೆ ಇದೇ ಕಾರಣ.

ಶೈಲಿನಿ! ನಾನು ಇನ್ನೂ ಹೇಳುವುದಕ್ಕಿಂತ ನನ್ನ ಶ್ವಾಸವು ನಿಂತು ಹೋದರೆ ಚೆನ್ನಾಗಿತ್ತಲ್ಲವೆ? ನಾನು ಇನ್ನೂ ಬರೆಯುವುದಕ್ಕಿಂತ ನನಗೆ ಕೈಗೆಟ್ಟರೆ ಒಳ್ಳೆಯದಾಗಿತ್ತಲ್ಲವೇ? ನಾನು ನಿನ್ನ ಪಾಣಿಗ್ರಹಣ ಮಾಡಿದ್ದು ಹೊರತು ನಿನ್ನ ಶುದ್ಧದೇಹವನ್ನು ನನ್ನ ಅಶುದ್ಧತೆಯಿಂದ ಹಾಳು ಮಾಡಲಿಲ್ಲ. ನಾನು ಸ್ವಾಮಿದ್ರೋಹ ಎನ್ನಿಸಿಕೊಳ್ಳುವುದಕ್ಕಿಂತಲೂ ಕಪಟಪ್ರೇಮಿಯೆಂದಾದರೂ ಜನಗಳಿಂದ ಹೇಳಿಸಿಕೊಳ್ಳುವೆನು. ನೀನು ನನ್ನನ್ನು ಕ್ಷಮಿಸು!

ನನ್ನನ್ನು ಶುದ್ಧವಾಗಿ ಮಾಡಿಬಿಡು! ನೀನು ಯಾರನ್ನು ನೋಡಿ ಶಿವಾಜಿಯೆಂದು ಭ್ರಾಂತಿಗೊಂಡೆಯೋ ಆ ಹಿರೋಜಿ ಫರ್ಜಂದ ಎಂಬ ಈ ಪಾಪಿ ಮರಾಟನನ್ನು ಇನ್ನು ಸಂಪೂರ್ಣವಾಗಿ ಮರೆತುಬಿಡು. ನೀನು ಮರೆತು ಬಿಡುವುದೆ ನನಗೆ ಕ್ಷಮಾಪಣೆಯೆಂದು ಭಾವಿಸುವೆನು.

**ಹಿರೋಜಿ ಫರ್ಜಂದ್.**

ಅವರಂಗಜೀಬ್ ಬಾದಶಹನು ಈ ಕಾಗದವನ್ನು ಕೇಳುತ್ತಲೇ ಕೋಪಗೊಂಡನು; ದುಃಖಗೊಂಡನು. ಶಿವಾಜಿ ತಪ್ಪಿಸಿಕೊಂಡನು ಎಂದು ಕೋಪ; ರಾಜಸಿಂಹನು ಮಗಳೊಡನೆ ಸತ್ತನೆಂದು ದುಃಖ. ಶಿವಾಜಿಯ ಬೆನ್ನ ಹಿಂದೆ ಜನಗಳನ್ನು ಕಳುಹಿಸಿದನು. ಶಿವಾಜಿಯ ಹೆಜ್ಜೆ ಹಿಡಿಯಲಿಕ್ಕೆ ಆಗದೆ ಹೋಯಿತು. ಬಾದಶಹನು ಮೂರು ಶವಗಳಿಗೂ ಹಿಂದೂ ದಹನ ಸಂಸ್ಕಾರಗಳನ್ನು ಮಾಡಿಸಿದನು. ಆದರೆ, ೧೫ ದಿನಗಳ ವರೆಗೆ ಅವನು “ಆಮ್‌ಖಾಸ್‌ಖಾನೆ” ಯಲ್ಲಿ ಕಾಲಿಡಲಿಲ್ಲವಂತೆ.

# ನಮ್ಮ ಇತರ ಪ್ರಕಟಣೆಗಳು

ಪಶ್ಚಾತ್ತಾಪ (ಕಾದಂಬರಿ) – ಶ್ರೀ ಮುಳಿಯ ತಿಮ್ಮಪ್ಪಯ್ಯನವರಿಂದ.

ಹಾಸನ್ ಟೋಪಿ – ಶ್ರೀ ಸುಬ್ರಾಯಾನುಜರವರಿಂದ.

ಪಾಪ-ಪುಣ್ಯ – ಶ್ರೀ ಯಚ್. ವಿ. ಸುಬ್ರಾಯಾನುಜರವರಿಂದ.

ಸಂಯೋಗಿತೆ (ಐತಿಹಾಸಿಕ ಕಾದಂಬರಿ) – ಶ್ರೀ ವಿನಾಯಕ ಶಾಸ್ತ್ರಿ ಇವರಿಂದ.

ಸ್ವಲ್ಪ ನಗಬಾರದೆ? (ನಗಿಸುವ ಸಣ್ಣ ಕಥೆಗಳು ಮತ್ತು ಲೇಖಗಳು)

ಕನ್ನಡ ಜೈನ ವಾಙ್ಮಯ – ಶ್ರೀ ಆರ್. ತಾತಾಚಾರ್ಯ ಎಂ.ಎ. ಎಲ್. ಟಿ., ಇವರಿಂದ

ಚೆಂಗಲವೆ (ಕವನ ಸಂಗ್ರಹ) – ಶ್ರೀ ಪಾಂಡೇಶ್ವರ ಗಣಪತಿರಾವ್ ಇವರಿಂದ.

ಅಜಿತ ತೀರ್ಥಂಕರ ಪುರಾಣ ತಿಲಕಂ – ಭಾಗ ೧– ರನ್ನಕವಿ ವಿರಚಿತ.

ಭಕ್ತಶಿಖಾಮಣಿ ದಾಮಾಜಿಪಂತ (ಸಂಗೀತ ನಾಟಕ) – ಶ್ರೀ ಜಿ. ಯನ್. ಲಕ್ಷ್ಮಣ ಪೈ ಇವರಿಂದ.

ಅಹಿಂತಕ (ಏಕಾಂಕ ನಾಟಕ) – ಶ್ರೀನಂದ ಇವರಿಂದ.

# ಶಿಶು ಸಾಹಿತ್ಯ

ಗುಬ್ಬಿ ಪಾಯಸ

ಪಾಪೋಸಿನ ಫಜೀತಿ

ಗಡ್ಡದ ಅಜ್ಜಯ್ಯ



ಮಕ್ಕಳ ಕಥೆಗಳು

ಗಿರಿಗಿಟಿ (ಮಕ್ಕಳ ಪದಗಳು)

ಕಾಗದ – ಕತ್ತರಿ (ಗೆಯ್ಮೆಯ ಕೈಪಿಡಿ)

ದೇಶಿ ದೀಪಗಳು ( “ “)

**ಬಾಳಿಗಾ ಎಂಡ್ ಸನ್ಸ್**

**ಪ್ರಕಾಶಕರು,**

**ಮಂಗಳೂರು.**